ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೧ ಮಾರ್ಚ್ ೨೦೦೫ ಸಂಚಿಕೆ ೩



ಲಕ್ಷಾಂತರ ಭಕ್ತರ ಕಣ್ಮನಗಳನ್ನು ತಣಿಸಿದ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವ



ಬೆಳ್ಳಿಪಾಲಕಿ ಉತ್ಸವ



ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ



ದನಗಳ ಜಾತ್ರೆ



ಮುಖಪುಟ
ವೈಭವದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ
☎ : 95816-2278052

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ
☎ : 95816-2283600

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
☎ : 95816-2282828
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – 572 104.
☎ : 95816-2282211

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.5, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – 560 054.
ದೂರವಾಣಿ : 23604087

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೧ ಮಾರ್ಚ ೨೦೦೫ ಸಂಚಿಕೆ : ೩

## ಒಳಪುಟಗಳಲ್ಲಿ..........



| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೧೦೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



# ಶ್ರೀ ಸಿದ್ಧಲಿಂಗೇಶ್ವರ ಜಾತ್ರೆ ....

ಜಾತ್ರೆಗಳು ಈ ನಾಡಿನ ಉದ್ದಗಲಗಳನ್ನು ಭಾವೈಕ್ಯ ಬದುಕಿನೆಡೆಗೆ ನಡೆಸಿದ ಸಾಂಸ್ಕೃತಿಕ ಉತ್ಸವಗಳು. ಜೀವನೋತ್ಸಾಹದ ಬಹಿರ್ಮುಖಗಳು. ಜಾತ್ರೆಗಳ ಇತಿಹಾಸವನ್ನು ಅವಲೋಕಿಸಿದರೆ ಭಾರತೀಯರ ಜೀವನ ಶ್ರದ್ಧೆಯ, ನಂಬಿಕೆಯ, ಭಕ್ತಿಯ, ಜೀವನ ಪ್ರೀತಿಯ ಪರಿಚಯವಾದೀತು! ಒಂದೊಂದು ಜಾತ್ರೆಗೂ ತನ್ನದೇ ಆದ ಹಿನ್ನೆಲೆಯಿದೆ. ಪೌರಾಣಿಕ, ಚಾರಿತ್ರಿಕ, ಜಾನಪದೀಯವಾದ ಮೂಲದಿಂದ ಬಂದಿರುತ್ತವೆ. ಯಾವುದೇ ಜಾತ್ರೆಯಾಗಲೀ ಅಲ್ಲೊಂದು ದೈವಾರಾಧನೆ ಇದ್ದೇ ಇರುತ್ತದೆ. ಆ ಜಾತ್ರೆಯ ಸ್ವರೂಪಗಳಲ್ಲಿ ವೈವಿಧ್ಯತೆಯಿರುತ್ತದೆ. ಒಂದಲ್ಲ ಒಂದು ವಿಶೇಷತೆಯಿರುತ್ತದೆ. ಜಾತ್ರೆ ಕೇವಲ ಜನರಿಗೆ ಮಾತ್ರ ಸೀಮಿತವಾಗದೆ ಜಾನುವಾರುಗಳಿಗೂ ಹೆಸರಾಗಿರುತ್ತದೆ. ಜಾತ್ರೆಗಳನ್ನು ಕುರಿತು ಹಾಡುಗಳು, ಕಥೆಗಳು, ಗಾದೆಗಳು ಕೂಡ ರಚಿತವಾಗಿರುವುದುಂಟು.

ಜಾತ್ರೆಯೆಂದರೆ ಹಳ್ಳಿಗರಿಗೆ ಒಂದು ಆನಂದ. ತೇರು ಕಟ್ಟಿ ಎಳೆಯುವುದು, ಮೋಜುಮಾಡಿ ಹಿಗ್ಗುವುದೂ, ಉತ್ಸವಮಾಡಿ ಕುಣಿದು ಕುಪ್ಪಳಿಸುವುದೂ, ದೇವರಿಗೆ ಹರಕೆ ಒಪ್ಪಿಸಿ ಧನ್ಯವಾಗುವುದೂ, ದೇವರು ಶಾಂತನಾದರೆ ಜಗತ್ತೇ ಶಾಂತವಾದೀತೆಂಬ ಕಲ್ಪನೆಯು ಜಾತ್ರೆಗಳ ಹಿಂದಿರುವ ಭಾವನೆ. ಸಾಧು ಸತ್ಪುರುಷರ, ಶರಣರ, ಹೆಸರಿನಲ್ಲಿ ಜಾತ್ರೆಗಳು ನಡೆಯುತ್ತವೆ. ಕರ್ನಾಟಕದಲ್ಲೆಲ್ಲಾ ಶರಣರ ಜಾತ್ರೆಗಳು ವರ್ಷದ ಬೇರೆ ಬೇರೆ ಋತುಗಳಲ್ಲಿ ನಡೆದುಕೊಂಡು ಬಂದಿವೆ. ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಮಲೆಯ ಮಹದೇಶ್ವರ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಎಡೆಯೂರು ಸಿದ್ಧಲಿಂಗೇಶ್ವರ, ಸುತ್ತೂರು ಶಿವರಾತ್ರೀಶ್ವರ, ಸಿದ್ದಗಂಗೆಯ ಸಿದ್ಧಲಿಂಗೇಶ್ವರ ಮುಂತಾಗಿ ಶರಣರ ಜಾತ್ರೆಗಳು ಪ್ರಸಿದ್ಧವಾಗಿವೆ.

ಸಿದ್ದಗಂಗೆಯ ಶ್ರೀಸಿದ್ಧಲಿಂಗೇಶ್ವರ ಜಾತ್ರೆಗೆ ಒಂದು ನೂರು ವರ್ಷಕ್ಕೂ ಹೆಚ್ಚಿನದಾದ ಇತಿಹಾಸವಿದೆ. ಇದು ಅಭಿಮಾನದ ನುಡಿಯಲ್ಲ, ಗ್ರಂಥಾಧಾರಗಳಿವೆ. ''೧೯೧೨ರಲ್ಲಿ ಮುದ್ರಿತವಾದ ವೇ. ನಂ. ಶಿವಪ್ಪಶಾಸ್ತ್ರಿಗಳಿಂದ ರಚಿತವಾದ ''ಸಿದ್ಧಲಿಂಗೇಶ್ವರ ವಿಜಯ'' ಎಂಬ ವಚನ ಕಾವ್ಯದ ಪೀಠಿಕೆಯಲ್ಲಿ ''ತುಮಕೂರಿನ ಸಮೀಪದಲ್ಲಿರುವ 'ಸಿದ್ದಗಂಗೆ' ಎಂಬ ಕ್ಷೇತ್ರವು ಇವರು (ಸಿದ್ಧಲಿಂಗೇಶ್ವರರು) ಲಿಂಗಪೂಜೆಯಂ ಮಾಡಿದ ಸ್ಥಲವಾದ ಕಾರಣ ಅದು ಅತ್ಯಂತ ಪ್ರಸಿದ್ಧವಾಗಿ ಪ್ರತಿವರ್ಷವೂ ಜಾತ್ರೆಯೂ, ಅಲ್ಲಿ ವಿಶೇಷವಾದ ಅನ್ನದಾನಗಳೂ ನಡೆಯುವುವು'' ಎನ್ನಲಾಗಿದೆ. ೧೯೧೨ರ ವೇಳೆಗಾಗಲೇ ಶ್ರೀಮಠದ ಜಾತ್ರೆ ಮತ್ತು ಅನ್ನದಾಸೋಹಗಳು ಪ್ರಸಿದ್ಧವಾಗಿದ್ದವೆಂಬುದು ತಿಳಿಯುತ್ತದೆ. ಮೊದಲಿಗೆ ಶ್ರೀ ಜಾತ್ರೆ ಮಹಾನವಮಿ ಸಂದರ್ಭದಲ್ಲಿ ನಡೆಯುತ್ತಿತ್ತೆಂದೂ, ಲಿಂಗೈಕ್ಯ ಶಿವಯೋಗಿ ಪೂಜ್ಯ ಶ್ರೀ ಉದ್ದಾನ ಸ್ವಾಮಿಗಳವರ ಸೇವಾವಧಿಯಲ್ಲಿ ಶಿವರಾತ್ರಿ ಸಂದರ್ಭದಲ್ಲಿ ಜರುಗುವ ಪದ್ಧತಿ ಜಾರಿಗೆ ಬಂದಿತೆಂದೂ ತಿಳಿದುಬರುತ್ತದೆ. ಆ ಸಮಯದಲ್ಲಿ ಸ್ವತಃ ಶ್ರೀಉದ್ದಾನ ಸ್ವಾಮಿಗಳೇ ಸುತ್ತುಮುತ್ತಿನ ಜಾತ್ರೆಗಳಿಗೆ ಹೋಗಿ ಡಂಗುರ ಸಾರಿಸುವುದರ ಮೂಲಕ ಶ್ರೀ ಜಾತ್ರೆಗೆ ರೈತವರ್ಗದವರನ್ನು ಆಹ್ವಾನಿಸುತ್ತಿದ್ದರೆಂದು ಹಿರಿಯರು ಹೇಳುತ್ತಾರೆ. ಶ್ರೀ ಜಾತ್ರೆಗೆ ಬಂದ ಭಕ್ತಾಧಿಗಳೆಲ್ಲ ಅನ್ನದಾಸೋಹಕ್ಕೆ ಜಾತ್ರೆಯ ಎಲ್ಲ ಕಡೆಯಲ್ಲಿ ನಗಾರಿ ಬಾರಿಸಿಕೊಂಡು ಪ್ರಸಾದಕ್ಕೆ (ಊಟಕ್ಕೆ) ಕರೆಕೊಡುತ್ತಿದ್ದರೆಂದೂ ಹೇಳುತ್ತಾರೆ. ಅಂದು ಶ್ರೀಗಳು ಆರಂಭಿಸಿದ ಶ್ರೀಮಠದ ಜಾತ್ರೆ ಇಂದೂ ಶತಾಧಿಕವಾಗಿ ಬೆಳೆದುಬಂದಿದೆ. ಜಾತ್ರೆಯ ಪ್ರಮುಖ ಅಂಗವಾಗಿ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನವೇರ್ಪಡುತ್ತಿದೆ. ಹದಿನೈದು ದಿನಗಳು ಗ್ರಾಮೀಣ ಬಂಧು-ಭಗಿನಿಯರಿಗಾಗಿ ತೆರೆದಿರುತ್ತದೆ. ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಶ್ರೀಗೋಸಲಸಿದ್ಧೇಶ್ವರಸ್ವಾಮಿಯ ಉತ್ಸವ, ವೃಷಭವಾಹನ, ಗಜವಾಹನ, ನಂದಿವಾಹನ, ರಾವಣವಾಹನ, ಹುಲಿವಾಹನ, ಸಿಂಹವಾಹನ, ಅಶ್ವವಾಹನ, ನವಿಲುವಾಹನ, ಶೇಷವಾಹನ, ಹುತ್ತದವಾಹನ, ನವರಂಗಪಾಲಕಿ ಉತ್ಸವ, ಬಿಲ್ವವೃಕ್ಷವಾಹನ, ಮುತ್ತಿನಪಾಲಕಿ ಉತ್ಸವ, ರಥೋತ್ಸವ, ರುದ್ರಾಕ್ಷಿ ಮಂಟಪೋತ್ಸವ, ಬೆಳ್ಳಿ ಪಾಲಕಿ ಉತ್ಸವ, ತೆಪ್ಪೋತ್ಸವ, ಪಂಚಬ್ರಹ್ಮೋತ್ಸವ ಮತ್ತು ಶಿವಾನುಭವಗೋಷ್ಠಿಗಳು ಜರುಗುತ್ತವೆ. ಇದರ ಜೊತೆಗೆ ಪ್ರತಿನಿತ್ಯ ಸಂಜೆ ಸಾಮೂಹಿಕ ಪ್ರಾರ್ಥನಾ ಸಭೆಯಲ್ಲಿ ಧಾರ್ಮಿಕ ಪ್ರವಚನಗಳು, ಉತ್ಸವಗಳಲ್ಲಿ ಜನಪದ ಕಲಾಪ್ರದರ್ಶನಗಳು, ಶಿವಕಥಾಪ್ರವಚನಗಳೂ ನಡೆಯುತ್ತವೆ. ಜಾತ್ರೆಗೆ ಬರುವ ಜನ, ಜಾನುವಾರುಗಳ ಆರೋಗ್ಯರಕ್ಷಣೆಗಾಗಿ ಆಸ್ಪತ್ರೆಗಳು, ಜಾನುವಾರುಗಳಿಗೆ ಬಹುಮಾನ ಯೋಜನೆ, ವಿಮಾಯೋಜನೆ, ತಾತ್ಕಾಲಿಕ ಬ್ಯಾಂಕಿನ ವ್ಯವಸ್ಥೆ, ಶಾಂತಿ ಸಂರಕ್ಷಣೆಗಾಗಿ ರಕ್ಷಣಾವ್ಯವಸ್ಥೆ, ಸಾರಿಗೆ ಸಂಪರ್ಕ ವ್ಯವಸ್ಥೆಗಳನ್ನು ಮಾಡಿರಲಾಗುತ್ತದೆ. ಜಾತ್ರಾರ್ಥಿಗಳಿಗೆಲ್ಲ ಅನ್ನದಾಸೋಹ ದಿನ ಎರಡೂ ಹೊತ್ತು ಹತ್ತಾರು ಕೊಪ್ಪಲುಗಳಲ್ಲಿ ಏರ್ಪಾಡುಮಾಡಿರುತ್ತದೆ. ನೀರು, ನೈರ್ಮಲ್ಯದ ಅನುಕೂಲತೆಯಿರುತ್ತದೆ. ಶ್ರೀಮಠದ ಜಾತ್ರೆಯ ಯಶಸ್ಸಿಗಾಗಿ ಹಗಲಿರುಳೂ ದುಡಿಯುತ್ತಾರೆ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಮತ್ತು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು. ಶ್ರೀಗಳೀರ್ವರ ಮಾರ್ಗದರ್ಶನದಲ್ಲಿ ಸಾವಿರ ಸಾವಿರ ಹಳೆಯ ವಿದ್ಯಾರ್ಥಿಗಳು, ಸಂಸ್ಥೆಯ ಶಿಕ್ಷಕ ಹಾಗೂ ಸಿಬ್ಬಂದಿ ಬಂಧುಗಳು, ಕಾರ್ಯಾಲಯದ ಆಡಳಿತ ವರ್ಗದವರು, ಭಕ್ತಾದಿಗಳು 'ಇದೊಂದು ತಮಗೊದಗಿದ ಸೌಭಾಗ್ಯ'ವೆಂಬ ಸದ್ಭಾವನೆಯಿಂದ ದಣಿವರಿಯದೆ ಶ್ರಮಿಸುವಲ್ಲಿ ಧನ್ಯತೆಯನ್ನನುಭವಿಸುತ್ತಾರೆ.

ವರ್ಗ, ವರ್ಣ, ವಯ, ಕುಲ, ಲಿಂಗ ಮುಕ್ತವಾದ ಜಾತ್ರೆಗಳು ಅನೌಪಚಾರಿಕ ಶಿಕ್ಷಣಾಲಯಗಳು. ಅವು ಅಕ್ಷರ ಕಲಿಸದ ಆನಂದನನ್ನೀಯುವ ವಿಶ್ವವಿದ್ಯಾಲಯಗಳು. ಮನುಷ್ಯನಲ್ಲಿರುವ ಕುಬ್ಜ ಭಾವನೆಗಳನ್ನು ಬಿಡಿಸಿ ಭವ್ಯತೆಯನ್ನ ಮುಂದೆ ನಮ್ರತೆಯನ್ನು ಕಾಣುವ ಮಂಗಳಾಲಯಗಳು. ಈ ವರ್ಷ ೨೮-೨-೨೦೦೫ ರಿಂದ ವಸ್ತುಪ್ರದರ್ಶನ ೧೪-೩-೨೦೦೫ರವರೆಗೆ, ೨-೨-೨೦೦೫ ರಿಂದ ೧೧-೩-೨೦೦೫ರವರೆಗೆ ಧಾರ್ಮಿಕ ಉತ್ಸವಗಳೂ ಜರುಗುತ್ತವೆ.

– ಸಂಪಾದಕ







# ಕಾಲದ ಸದ್ಬಳಕೆ

ಮೊನ್ನೆ ಸಮಾರಂಭವೊಂದರಲ್ಲಿ ಭಾಗವಹಿಸಿದ ಸಂದರ್ಭ. ಬೃಹತ್ ಜನಸ್ತೋಮ. ವೈಭವದ ವ್ಯವಸ್ಥೆ. ಗಣ್ಯಾತಿಗಣ್ಯರ ಉಪಸ್ಥಿತಿ. ಸುಸಜ್ಜಿತ ವೇದಿಕೆ. ತಳಿರು ತೋರಣಗಳ ಶೃಂಗಾರ- ವಿದ್ಯುದ್ದೀಪಗಳ ಅಲಂಕಾರ, ಸುಮಧುರ ಭಕ್ತಿಗೀತೆಗಳ ಝೇಂಕಾರ. ಹರಿವ ನದಿಗಳು ನಿಂತು, ಸುಳಿದು ಬೀಸುವಗಾಳಿ ನಿಂತು ಸಮಾರಂಭದಲ್ಲಿ ಭಾಗವಹಿಸಿರಬಹುದೇನೋ ಎಂಬಂತಹ ಸನ್ನಿವೇಶ. ಕಾರ್ಯಕ್ರಮ ಪ್ರಾರಂಭವಾಯಿತು ಸಂಜೆ ಆರು ಘಂಟೆಗೆ. ನಿರೂಪಕರ ಮಾತಿನ ಮತಾಪು ಬೆಳಗಿತು. ಪ್ರಾರ್ಥನೆ ಇಂಥವರಿಂದ ಎಂದು ಘೋಷಿಸಲು ನಿರೂಪಕರು ತೆಗೆದುಕೊಂಡ ಕಾಲವೆಷ್ಟುಗೊತ್ತೆ? ಕೇವಲ ಹತ್ತು ನಿಮಿಷ. ಪ್ರಾರ್ಥನೆ ಮಾಡಿದ ತಾಯಿ ಹತ್ತು ನಿಮಿಷ ಹಾಡಿದರು. ಸ್ವಾಗತ ಮಾಡುತ್ತಾರೆ ಇಂಥವರು ಎಂದು ಹೇಳುವುದಕ್ಕೆ ಹನ್ನೆರಡು ನಿಮಿಷ ಬಳಸಿದ್ದು. ಸ್ವಾಗತಮಾಡಿದ್ದು ಮೂವತ್ತೆರಡು ನಿಮಿಷ. ಆ ಮೇಲೆ ಅತಿಥಿಗಳಿಗೆ ಮಾಲಾರ್ಪನೆ ಸೇವೆ. ಇಂಥವರಿಗೆ ಇಂಥವರು ಮಾಲಾರ್ಪಣೆ ಮಾಡುತ್ತಾರೆ ಎನ್ನುವಾಗ ಮಾಲಾರ್ಪಣೆಮಾಡುವವರ ಸಂಕ್ಷಿಪ್ತ ಪರಿಚಯ-ಅತಿಥಿಗಳ ಗುಣಗಾನ. ಹದಿಮೂರು ಮಂದಿ ಅತಿಥಿಗಳು. ಅವರೆಲ್ಲರಿಗೆ ಮಾಲಾರ್ಪಣೆ ಮಾಡಲು ವಿನಿಯೋಗವಾದ ಕಾಲ ಕೇವಲ ಎಪ್ಪತ್ತೈದು ನಿಮಿಷಗಳು. ಮತ್ತೆ ನಿರೂಪಕರಿಂದ ಅತಿಥಿಗಳಿಗೆ ಮಾಲಾರ್ಪಣೆಮಾಡಿದ ಮಹನೀಯರಿಗೆ ವಂದನೆ ಸಲ್ಲಿಕೆಗಾಗಿ ಐದು ನಿಮಿಷ. ಸಮಾರಂಭದ ಉದ್ಘಾಟನೆ - ಜ್ಯೋತಿ ಬೆಳಗಿಸುವುದು. ಅದಕ್ಕಾಗಿ ಎಲ್ಲ ಅತಿಥಿಗಳ, ಉದ್ಘಾಟಕರ, ಸ್ಥಳೀಯ ಪ್ರಮುಖರ, ಪದಾಧಿಕಾರಿಗಳ, ಕವಾಯಿತು, ಫೋಟೋಗ್ರಾಫರರ, ವಿಡಿಯೋಗ್ರಾಹಕರ ಸನ್ನದ್ಧತೆಗಳಿಗಾಗಿ ಐದು ನಿಮಿಷ, ಅನಂತರ ಎಲ್ಲರ ಪೂರ್ವಸ್ಥಿತಿಗೆ ಮರಳುವಿಕೆ. ನಿರೂಪಕರಿಂದ ಉದ್ಘಾಟಕರ ನುಡಿಸೇವೆಗೆ ಆಹ್ವಾನ. ಅದೂ ಆರು ನಿಮಿಷ. ಉದ್ಘಾಟಕರು ತಾವು ಏನೇನು ಮಾಡಿದ್ದೇವೆ ಎಂಬ ಪ್ರಸ್ತಾವಿಕ ಮಾತುಗಳೊಂದಿಗೆ ಪ್ರಸ್ತುತ ಸಮಾರಂಭಕ್ಕೆ ತಮ್ಮಿಂದಾಗಿರುವ ಸಹಾಯವೆಷ್ಟು ಎಂಬುದರ ಪ್ರಸ್ತಾಪ, ತಾವೆಷ್ಟು ಮುಖ್ಯ ಸಮಾರಂಭಕ್ಕೆ ಎಂಬುದನ್ನು ಸಮರ್ಥವಾಗಿ ಬಿಂಬಿಸಿಕೊಂಡರು. ಅದಕ್ಕಾಗಿ ಅವರು ತೆಗೆದುಕೊಂಡ ಸಮಯ ಕೇವಲ ಇಪ್ಪತ್ತೈದು ನಿಮಿಷ. ಆಮೇಲೆ ಸನ್ಮಾನ ಕಾರ್ಯಕ್ರಮ. ಸನ್ಮಾನಿತರು ಹತ್ತಮಂದಿ. ಅವರ ಪರಿಚಯ ಮಾಡಿಕೊಟ್ಟವರು ಹತ್ತುಮಂದಿ. ಅವರಿಗೆ ಶಾಲುಹೊದಿಸಿದವರು ಹತ್ತುಮಂದಿ. ಹಾರ ಹಾಕಿದವರು ಹತ್ತು ಮಂದಿ. ಫಲತಾಂಬೂಲ ಅರ್ಪಿಸಿದವರು ಹತ್ತು ಮಂದಿ. ಸನ್ಮಾನ ಪತ್ರ, ಒಪ್ಪಿಸಿದವರು ಹತ್ತು ಮಂದಿ. ನಿರೂಪಕರಿಂದ ಈ ಸೇವೆ ನಡೆಸಿಕೊಟ್ಟ ಮಹನೀಯರೆಲ್ಲರಿಗೆ ವಂದನೆ ಸಲ್ಲಿಕೆ. 'ಈಗ ತಾವೆಲ್ಲರೂ ಚಾತಕ ಪಕ್ಷಿಗಳಂತೆ ಕಾಯುತ್ತಿರುವ ಮುಖ್ಯ ಕಾರ್ಯಕ್ರಮ - ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ' – ನಿರೂಪಕರಿಂದ ಘೋಷಣೆ. ನಮಗೆ ಏನು ಹೇಳಬೇಕೋ ತಿಳಿಯದಂತಾಯಿತು. ಬಸವಣ್ಣನವರು ಒಂದು ಮಾತು ಹೇಳಿದ್ದಾರೆ ''ಕೋಳಿ ಬಲ್ಲದು ವೇಳೆಯ ಗುಣವ''. ಆಧುನಿಕ ಜ್ಞಾನಿಗಳು ಹೇಳುತ್ತಾರೆ Time is money. Time is the God. ಕಾಲ ಯಾರನ್ನು ಕಾಯುವುದಿಲ್ಲ. ಕಾಲದ ಬೆಲೆಯನ್ನು ತಿಳಿದು ಬಾಳುವುದೇ ಮನುಷ್ಯ ಜನ್ಮದ ಸಾರ್ಥಕತೆ ಎನ್ನಬೇಕಾಯಿತು. ಮುನ್ನೂರು ಕಿ.ಮೀ. ದೂರದಿಂದ ಕರೆಸಿಕೊಂಡಿದ್ದೀರಿ. ವೈಭವೋಪೇತ ವ್ಯವಸ್ಥೆಮಾಡಿದ್ದೀರಿ. ಜನಸಾಗರವನ್ನೇ ತಂದು ಕೂರಿಸಿದ್ದೀರಿ. ಎಲ್ಲ ಸರಿ. ಆದರೆ ಕಾಲ ಮಹತ್ವವನ್ನರಿತು ಕಾರ್ಯಕ್ರಮ ನಡೆಸುವ ವಿವೇಚನೆ ಅಭಾವತಂದುಕೊಳ್ಳಬಾರದಿತ್ತು. ''ಹೊತ್ತು ಹೋಗದ ಮುನ್ನ ಮುಟ್ಟಿ ಪೂಜಿಸುವ ಸದ್ಭಾವ, ಸದ್ಬುದ್ಧಿ, ಸದ್ವಿವೇಚನೆ ನಿಮ್ಮದಾಗಲಿ'' ಎಂದು ಐದು ನಿಮಿಷಗಳಲ್ಲಿ ನಮ್ಮ ಮಾತನ್ನು ಮುಗಿಸಿದೆವು.

*

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

ಇಬ್ಬರಿಗೊಬ್ಬ ಮಗಹುಟ್ಟಿ
ಅವನೊಬ್ಬನಿಗೈವರು ಹೆಂಡರು ನೋಡಾ
ಸವತಿ ಮತ್ಸರವಬಿಟ್ಟು ತಮ್ಮ ತಮ್ಮ ಭಾವದಲ್ಲಿ ನೆರೆವರು ನೋಡಾ
ಐವರ ಕೂಟದಲ್ಲಿ ಮೈಮರೆದುದ ಕಂಡು
ಮೇಲೊಬ್ಬ ಸತಿ ಬಂದು ನೆರೆಯಲು
ಅವರ ಮನೆವಾರ್ತೆ ಕೆಟ್ಟಿತ್ತು.
ಆಕೆಯ ಸಂಗದಿಂದೆ ಸಯಿವೆರಗಾಗಿ
ಸರ್ವನಿರ್ವಾಣಿಯಾದೆನು ನೋಡಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

"ಶ್ರೀಗುರುಃ ಪತಿರಾಖ್ಯಾತಃ ಶ್ರೀ ಸತಿರೂಪ ಭಾಕ್ಚರಃ ತದ್ಧಸ್ತಮಸ್ತಕ ಸಂಯೋಗಾಚ್ಚಿವ ಲಿಂಗಂ ಸಮುದ್ಭವಂ'' ಎಂದು ಗುರು-ಶಿಷ್ಯರುಗಳ ಹಸ್ತಮಸ್ತಕ ಸಂಯೋಗದಿಂದ ಇಷ್ಟಲಿಂಗವೆಂಬ ಪುತ್ರನುದಯವಾದಲ್ಲಿ ಕ್ರಿಯಾದಿ ಪಂಚಶಕ್ತಿಯರು ಸ್ತ್ರೀಯರುಗಳಾಗುತ್ತಿಪ್ಪರು. ಅವರು ವೈರವರ್ಗವನ್ನು ಬಿಟ್ಟು ತಮ್ಮ ಶ್ರದ್ಧಾ ವಿಶ್ವಾಸದಿಂದ ಪರಶಿವಲಿಂಗದಲ್ಲಿ ಸಮರಸ ಸಂಯೋಗವನ್ನು ಅನುಭವಿಸುತ್ತಿರುವರು. ಆ ಪಂಚಶಕ್ತಿಯರ ಕ್ರಿಯಾಸಂಯೋಗವಾದಲ್ಲಿ ಪರವಶವಾಗಿರ್ದಲ್ಲಿ ಚಿಚ್ಛಕ್ತಿ ಬಂದು ಸಂಯೋಗಿಸಲು, ಆ ಪಂಚಶಕ್ತಿಯರ ಕ್ರಿಯಾಭೇದವು ಜ್ಞಾನಶಕ್ತಿಯಲ್ಲಿ ನಿಷ್ಪತ್ತಿಯಾಗಿ ಆ ಜ್ಞಾನಶಕ್ತಿಯ ಸಮರಸ ಸಂಯೋಗದಿಂದ ಲಿಂಗದಲ್ಲಿ ಸಮಸ್ತ ಪ್ರಪಂಚಿನಿಂದ ಬಿಡಲ್ಪಟ್ಟಾತನಾದನು ಶಿವಶರಣನು. ಶರಣನು ಯಾರು? ಎಂಬುದನ್ನು ಈ ವಚನ ಸ್ಪಷ್ಟಗೊಳಿಸುತ್ತದೆ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ
ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ
ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ –
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

### ಶ್ರೀವಾಣಿ

ಕರ್ತವ್ಯ ಲೋಪದಿಂದ ಜೀವನ ಸಾಗಿಸುವುದು ಮಹಾಪಾಪ. ಕರ್ತವ್ಯ ಸಂಕಲ್ಪ ಅತ್ಯುತ್ತಮವಾದುದು.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ನೀನೇ ಶ್ರೀಶೈಲವು ನೀನೆ ಕಲ್ಯಾಣವು
ನೀನೇ ಕೂಡಲ ಸಂಗಮವು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನೇ ಶ್ರೀ ಉಳಿವೆಯು ನೀನೇ ಸೊನ್ನಲಿಗೆಯು
ನೀನೇ ನಡೆದಾಡುವ ಕದಳಿಯು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೌನಮುದ್ರೆಯತಾಳಿ ಗಾಢ ನಿದ್ರೆಯ ತೊರೆದು
ಧ್ಯಾನ ಜಾಗರದ ತಪಗೈವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿಯನಾದದ ನಡುವೆ ಗುಡಿಮನದ ನೆಡುವಿನೊಳು
ಎಡೆಬಿಡದೆ ನಡೆಸಿರುವ ಶಿವಚಿಂತೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆತ್ಮನಿಂದೆಯ ಹಗೆಯೆ ಆತ್ಮವಿಶ್ವಾಸಿಯೆ
ಆತ್ಮಬಲ ಸಾಹಸ ಸಹ್ಯಾದ್ರಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುಕುಲ ಚಂದನ ಶ್ರೀವನದ ಚಂದಿರನೆ
ಚರಿತಚಾರಿತ್ರ್ಯ ಪಾವನನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೆಲ ನೀರು ಸಿರಿಗಗನ ಸುಳಿಗಾಳಿ ಉರಿವಗ್ನಿ
ಪರಮಧನ್ಯ ನಿನ್ನ ಹಡೆದಿಲ್ಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಪಸಿ ವಿನೂತನೆ ವೀರವಿರಾಗಿಯೆ
ತಪವೆ ದಾಸೋಹವೆನಿಸಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಾಚಿ ತಬ್ಬಿ ನಿಂದೆ ಲೋಕ ಶೋಕವನೆಲ್ಲ
ಚಾಚಿ ಕೈಬೀಸಿ ಕರಕೊಂಡೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೈಬಿಡದೆ ನಡೆಸಿದೆ ಕಡುಬಡವ ಕುಡಿಗಳ
ಕಡೆಯಾಯ್ತಿದ್ದಡವ ಸೇರಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

## ಶ್ರೀ ಗುರುವಂದನ ಮತ್ತು ಅಮೃತ ಮಹೋತ್ಸವ ಸಮಾರಂಭ

**ದಿನಾಂಕ : 3, 4-4-2005** **ಬೆಳಿಗ್ಗೆ 10.00 ಘಂಟೆಗೆ**



ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ತ್ರಿವಿಧ ದಾಸೋಹಿಗಳು, ಪರಮತಪಸ್ವಿಗಳೂ, ನಡೆದಾಡುವ ದೇವರೆಂದೇ ಜನಮನದಲ್ಲಿ ಬೆಳಗುತ್ತಿರುವ ಶ್ರೀ ಮ.ನಿ.ಪ್ರ.ಸ್ವ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು 1.4.2005ರಂದು 98ನೇ ಶುಭಸಂವತ್ಸರಕ್ಕೆ ಪಾದಾರ್ಪಣೆ ಮಾಡುತ್ತಿದ್ದು, ಆ ಸಂಬಂಧವಾಗಿ 'ಗುರುವಂದನ' ಮತ್ತು ಪೂಜ್ಯ ಶ್ರೀಗಳವರು ವಿರಕ್ತಾಶ್ರಮ ಸ್ವೀಕಾರಮಾಡಿ 75 ವರ್ಷಗಳು ತುಂಬಿದ ಶುಭಸಂದರ್ಭದಲ್ಲಿ ಅಮೃತ ಮಹೋತ್ಸವ ಸಮಾರಂಭವನ್ನು ಶ್ರೀಮಠದಲ್ಲಿ ದಿನಾಂಕ 3.4.2005 ಮತ್ತು 4.4.2005ರಂದು ಬೆಳಿಗ್ಗೆ 10.00 ಘಂಟೆಗೆ ಏರ್ಪಡಿಸಲಾಗಿದೆ. ಸಮಾರಂಭದಲ್ಲಿ ವಿವಿಧ ಮಠಾಧೀಶರು, ರಾಷ್ಟ್ರದ ಮತ್ತು ರಾಜ್ಯದ ಗಣ್ಯಮಾನ್ಯರು ಭಾಗವಹಿಸುತ್ತಾರೆ. ಇದೇ ಸಂದರ್ಭದಲ್ಲಿ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಗಣ್ಯರನ್ನು ಗೌರವಿಸಲಾಗುವುದು.

ತಾವೂ ಸಮಾರಂಭದಲ್ಲಿ ಭಾಗಿಗಳಾಗಿ ಶ್ರೀ ಗುರುಕೃಪೆಗೆ ಪಾತ್ರರಾಗಬೇಕೆಂದು ಕೋರುತ್ತೇವೆ.

*ಶ್ರೀ ಸಿದ್ಧಲಿಂಗ ಸ್ವಾಮಿಗಳು*
ಉತ್ತರಾಧಿಕಾರಿಗಳು ಮತ್ತು
ಶ್ರೀಮಠದ ಶಿಕ್ಷಣ ಸಂಸ್ಥೆಯ ಸಮಸ್ತ ಸೇವಾ ಸಿಬ್ಬಂದಿ ಹಾಗೂ ಭಕ್ತ ಮಂಡಳಿ
ಶ್ರೀ ಸಿದ್ಧಗಂಗಾಮಠ, ತುಮಕೂರು ಜಿಲ್ಲೆ.

### ದೀಕ್ಷಾ ಸಂಸ್ಕಾರ

ಈ ಶುಭ ಸಂದರ್ಭದಲ್ಲಿ ವೀರಶೈವ ವಟುಗಳಿಗೆ ಲಿಂಗ ದೀಕ್ಷಾ ಸಂಸ್ಕಾರವನ್ನು ದಿನಾಂಕ 3.4.2005ರ ಬೆಳಿಗ್ಗೆ 5 ಘಂಟೆಗೆ ಏರ್ಪಡಿಸಲಾಗಿದೆ. ಆಸಕ್ತಿಯುಳ್ಳವರು ಹೆಚ್ಚಿನ ವಿವರಗಳಿಗೆ 2.4.2005ರ ಶನಿವಾರ ಸಂಜೆ 6 ಘಂಟೆಯೊಳಗೆ ಶ್ರೀಮಠದ ಆಡಳಿತಾಧಿಕಾರಿಗಳನ್ನು ಸಂಪರ್ಕಿಸುವುದು. ವಟುಗಳು ಬರುವಾಗ ದೀಕ್ಷೆಗೆ ಬೇಕಾಗುವ ವಸ್ತ್ರ - ಪೂಜಾಸಾಮಗ್ರಿಗಳೊಂದಿಗೆ ಬರುವುದು. ಈ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಲು ಕೋರಲಾಗಿದೆ.

# ವಿಭೂತಿ

ಭಾಗ – ೩

– ದೇಜಗೌ
ವಿಶ್ರಾಂತ ಕುಲಪತಿಗಳು,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಬಿಜ್ಜಳ ಬಸವಣ್ಣನವರ ಸ್ನೇಹಸೇತುವೆಯಲ್ಲೊಮ್ಮೆ. ತಲೆದೋರಿದ ಬಿರುಕು ಕಾಲಕ್ರಮೇಣ ಅಗಲವಾಗತೊಡಗುತ್ತದೆ. ಒಮ್ಮೆ ಸ್ನೇಹ ಕರಿತುಗೊಂಡಿತೆಂದರೆ, ಒಡೆದ ಮಡಕೆಯಂತೆ ಅದನ್ನು ರಿಪೇರಿ ಮಾಡಲಾಗದು. ಆ ಮಡಕೆ ಲೋಹದ್ದಾಗಿದ್ದ ಪಕ್ಷದಲ್ಲಿ, ಹಾಕಿದ ಬೆಸುಗೆಯೂ ಬಿಚ್ಚಿಹೋಗಬಹುದು. ಸ್ನೇಹ ಮುರುಟಿ ಹೋದನಂತರ ಬಿಜ್ಜಳ ಬಸವಣ್ಣನವರ ಪ್ರತಿಯೊಂದು ವರ್ತನೆಯಲ್ಲಿಯೂ ದೋಷವನ್ನೆ ಕಾಣತೊಡಗಿರಬೇಕು, 'ಸ್ನೇಹ ತಪ್ಪಿದ ಠಾವಿನಲ್ಲಿ ಗುಣವನರಸುವರೆ ಅಯ್ಯಾ' ಎಂದು ಬಸವಣ್ಣನವರು ಮೊದಮೊದಲು ತುಂಬ ಒದ್ದಾಡಿರಬೇಕು, ಒರಲಾಡಿರಬೇಕು. ಬಿಜ್ಜಳನ ಕುಹಕ ಕುಮಂತ್ರದಿಂದಾಗಿ 'ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರಲೇಸಯ್ಯಾ' ಎನ್ನುವಷ್ಟರಮಟ್ಟಿಗೆ ಅವರ ಮನಸ್ಸು ರೋಸಿಹೋಗಿರಬೇಕು.

*ಆರು ಮುನಿದು ನಮ್ಮನೇನ ಮಾಡುವರು?*
*ಊರು ಮುನಿದು ನಮ್ಮ ನೆಂತು ಮಾಡುವರು?*
*ನಮ್ಮ ಕುನ್ನಿಗೆ ಕೂಸ ಕೊಡಬೇಡ*
*ನಮ್ಮ ಸೊಣಗಂಗೆ ತಳಿಗೆಯನಿಕ್ಕಬೇಡ*
*ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲುದೆ,*
*ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನ್ನಕ್ಕ?*

ಎಂದು ನುಡಿದು, 'ಶರಣನಾರಿಗಂಜುವನಲ್ಲ' ಎಂದವರು ಘೋಷಿಸಿರಬೇಕು. ಅಥೀನಿಯನ್ನರನ್ನು ಕುರಿತು ಸೋಕ್ರತೀಸ್ ನೀಡಿದ ಎಚ್ಚರಿಕೆಯನ್ನೇ ಅವರು ಶರಣವಿರೋಧಿಗಳಿಗೆ ನೀಡಿರಬೇಕು.* ಇಷ್ಟಾದರೂ ಬಿಜ್ಜಳನಿಗೆ ವಿವೇಕೋದಯವಾಗದು. ಕೊಂಡೆಯರ ಕೊಂಡಾಟದ ಮದ್ಯಪಾನದಿಂದ ಅವನಿಗೆ ಸೊಕ್ಕೇರಿರಬೇಕು. ಸಮಯ ಸಂದರ್ಭವೊದಗಿದಾಗಲೆಲ್ಲ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಅವನು ಬಸವಣ್ಣನವರ ಬಗ್ಗೆ ಅವಹೇಳನ ಮಾತುಗಳಾಡಿರಬೇಕು. ಎಷ್ಟು ದಿನ ತಾನೇ ಅಂಥ ಮಾತುಗಳನ್ನು ಕೇಳಿಕೊಂಡಿರಲಾದೀತು? ನಿಜವಾದ ಶರಣ ಅಥವಾ ಸತ್ಯಾಗ್ರಹಿ ಹೇಡಿಯಲ್ಲ; ಧರ್ಮಕ್ಕೆ ಚ್ಯುತಿಯೊದಗಿದಾಗ, ಆತ್ಮಾಭಿಮಾನಕ್ಕೆ ಅಪಾಯವೊದಗಿದಾಗ ಅವನು ತೆಪ್ಪಗಿರುವುದು ಹೇಡಿತನವಾಗುತ್ತದೆ. ಅಂಥ ಪ್ರಕೋಪದ ಪರಿಸ್ಥಿತಿಯಲ್ಲಿ ಬಸವಣ್ಣನಂಥವರು

*ಆನೆ ಅಂಕುಶಕ್ಕಂಜುವುದೆ, ಅಯ್ಯಾ,*
*ಮಾಣದೆ ಸಿಂಹದ ನಖವೆಂದು ಅಂಜುವುದಲ್ಲದೆ?*
*ಆನೀ ಬಿಜ್ಜಳಂಗಂಜುವೆನೆ, ಅಯ್ಯಾ,*
*ಕೂಡಲ ಸಂಗಮದೇವಾ,*
*ನೀನು ಸರ್ವಜೀವದಯಾಪಾರಿಯಾದ ಕಾರಣ*
*ನಿನಗಂಜುವೆನಲ್ಲದೆ?*

ಎಂದು ಧರ್ಮ ಕ್ರೋಧವನ್ನು ಪ್ರಕಟಪಡಿಸಿದರೆ ಆಶ್ಚರ್ಯವಾಗದು, ಅಪರಾಧವಾಗಲಾರದು. ಮೊಲದ ಹೆಣಕ್ಕಿರುವ ಬೆಲೆ ದೊರೆಯ ಹೆಣಕ್ಕಿಲ್ಲವೆನ್ನುವಲ್ಲಿ ದೊರೆತನ ಸಿರಿತನಗಳ ಬಗೆಗಿನ ಅವರ ತಿರಸ್ಕಾರ ಲಾವಾರಸವಾಗುತ್ತದೆ. ಸಂಪ್ರದಾಯಸ್ಥರ ಹಿಡಿತದಲ್ಲಿ ಸಿಕ್ಕಿಕೊಂಡಿದ್ದ ದೊರೆಗೆ ಬಸವಣ್ಣವರ ಕಲ್ಪನೆಯ ಸಮಗ್ರ ಕ್ರಾಂತಿ ಸರಿಗಾಣುವುದಿಲ್ಲ; ದೊರೆತನ ಸಿರಿತನಗಳ ಬುಡಕ್ಕೆ, ಪೌರೋಹಿತ್ಯದ ಅಸ್ತಿತ್ವಕ್ಕೆ ಕುಠಾರಪ್ರಾಯವಾಗಿದ್ದ, ಶತಘ್ನಿಯಂತಿದ್ದ ಆ ಕ್ರಾಂತಿಯ ಮುನ್ನಡೆಗೆ ಬಿಜ್ಜಳನಂಥವರು ಬೆಂಬಲ ನೀಡುವುದುಂಟೆ? ಬೆಂಬಲ ನೀಡುವುದಿರಲಿ, ಅದನ್ನು ಹತ್ತಿಕ್ಕುವಲ್ಲಿ ತನ್ನ ಸಮಸ್ತ ಶಕ್ತಿಯನ್ನು ಬಳಸಿಕೊಂಡಿರಬೇಕು. ಶರಣರ ಬಳಿ ಮದ್ದುಗುಂಡುಗಳಿರಲಿಲ್ಲ; ಇದ್ದರೂ ಹಿಂಸಾತ್ಮಕ ಕಾರ್ಯಗಳಲ್ಲಿ ತೊಡಗುವಂತಿರಲಿಲ್ಲ; ಜನ ದಂಗೆಯೇಳಬಹುದು, ನಿಜ.

* ಗ್ರೀಕ್ ನೀತಿಸಂಹಿತೆಯ ಪ್ರಕಾರ ಸಮರಾಂತ್ಯದಲ್ಲಿ ಸತ್ತವರ ಹೆಣವನ್ನು ತಂದು ಸಮಾಧಿ ಮಾಡುವುದು ಸೇನಾನಾಯಕರ ಕರ್ತವ್ಯ. ಅಥೀನಿಯನ್ನರಿಗೂ ಲೆಸ್ಡಿಮೋನಿಯನ್ನರಿಗೂ ಯುದ್ಧ ನಡೆದಾಗ ನೀತಿಪಾಲನೆಯಾಗಲಿಲ್ಲ; ಸೆನೆಟ್ ಸದಸ್ಯರಲ್ಲಿ ಕೆಲವರು ಸೇನಾನಾಯಕರ ಕರ್ತವ್ಯಚ್ಯುತಿಯನ್ನು ಸಮರ್ಥಿಸಿಕೊಂಡರು. ಆಗ ಸದಸ್ಯರಲ್ಲೊಬ್ಬನಾದ ಸೋಕ್ರತೀಸ್ ಆ ಸಮರ್ಥನೆ ನ್ಯಾಯಬಾಹಿರವೆಂದು ವಾದಿಸುತ್ತಾನೆ. I thought it my duty to face the danger out in the cause of law and justice, and not to be an accomplice in your unjust proposal. ಅವನು ಮತ್ತೊಮ್ಮೆ ಘೋಷಿಸಿದ : 'God has commanded me to examine men ... Athenians. I hold you in the highest regard and love, but I will obey God rather tahn men.'





ಚತುರಂಗಬಲದ ಬೆಂಬಲವುಳ್ಳ ದೊರೆಗೆ ಅದನ್ನಡಿಗಿಸುವುದೇನೂ ಕಷ್ಟವಾಗದು. ಪ್ರಾಯಶಃ ಅರಮನೆಯ ಸಂಚುಹೊಂಚುಗಳೂ ಬಸವಣ್ಣನವರ ಜಿಗುಪ್ಸೆಗೆ ಕಾರಣವಾಗಿದ್ದಿರಬೇಕು. ಆಗವರು 'ಅರಸು ಮುನಿದರೆ ನಾಡೊಳಗಿರಬಾರದಯ್ಯಾ' ಎಂದು ಹಠಾತ್ತನೆ ನಿರ್ಧಾರ ಕೈಕೊಂಡು, ಕಲ್ಯಾಣವನ್ನು ತ್ಯಜಿಸಿ, ಸಂಗಮ ಕ್ಷೇತ್ರದ ಕಡೆಗೆ ಏಕಾಕಿಯಾಗಿ ಧಾವಿಸಿರಬೇಕು.

ಈಗ ತಿಳಿದಿರುವಂತೆ ಅವರ ಬಾಹ್ಯಜೀವನದ ಪ್ರಮುಖ ಘಟನೆಗಳು ಇವಿಷ್ಟೇ ಸರಿ. ಅವರ ಜೀವನ ಅಂತ್ಯಗೊಂಡ ರೀತಿಯ ಬಗೆಗೆ ಖಚಿತವಾದ ಪ್ರಮಾಣಗಳು ದೊರಕುವಂತಿಲ್ಲ. ಸಮಕಾಲೀನ ಶರಣರ ಕಡೆಗೆ ಕೊರಳು ಚಾಚಿ ನೋಡಿದರೆ ಲಾಭವಿಲ್ಲ. ಮುಸ್ಲಿಮರ ಕ್ರೌರ್ಯಕ್ಕೆ ಬಲಿಯಾದ ಕಲ್ಯಾಣದಲ್ಲಾಗಲೀ, ಅಜುಬಾಜಿನ ಪ್ರದೇಶಗಳಲ್ಲಾಗಲೀ ಐತಿಹಾಸಿಕ ದಾಖಲೆಗಳು ದೊರೆಯುವುದಾದರೂ ಹೇಗೆ? ಅವರು ಹರಿಹರ ಸೋಮನಾಥರ ಕಾಲಕ್ಕಾಗಲೇ ಅವತಾರಪುರುಷನ ಸ್ಥಾನಕ್ಕೇರಿದರೆಂದರೆ, ಆರಾಧನೆಯ ವ್ಯಕ್ತಿಯಾದರೆಂದರೆ, ಅವರ ಆಚೀಚಿನ ಜೀವನ ಚರಿತ್ರಕಾರರ ದೃಷ್ಟಿಯಲ್ಲಿ ಅಂತಿಮಯಾತ್ರೆಯ ಸಂಗತಿಗಳು ಅಪ್ರಮುಖವಾಗಿ ತೋರಿರಬೇಕು; ಅಥವಾ ಅವತಾರದ ಕಲ್ಪನೆಗೆ ಸರಿಗಟ್ಟುವಂತೆ, ಕಾವ್ಯನೀತಿಗನುವಾಗುವಂತೆ, ಪ್ರತಿಭಾ ಶ್ರೀಮಂತಿಕೆಯ ನೆರವಿನಿಂದ ಸಾಂಕೇತಿಕ ಘಟನೆಗಳನ್ನು ಸೃಷ್ಟಿಸಿಕೊಂಡಿರಬೇಕು. ಬಸವಣ್ಣನವರ ಶಿವತತ್ವ ಅಥವಾ ಆತ್ಮಜ್ಯೋತಿ ಭೌತಿಕಶರೀರದಿಂದ ವಿಮೋಚನೆಗೊಂಡ ಕೂಡಲೇ ವಿರಾಟ್‌ಶಕ್ತಿಯಾಗಿ ಪ್ರಕೃತಿಯಲ್ಲಿ ಸೇರಿಕೊಳ್ಳುತ್ತದೆ, ಜನಮನದಲ್ಲಿ ವಿಜೃಂಭಿಸುತ್ತದೆ. ಅಂದಮೇಲೆ ಅವರು ಸತ್ತು ಚಿರಂಜೀವಿಯಾಗುತ್ತಾರೆ. ವಿರಾಡ್ರೂಪಿಯಾಗುತ್ತಾರೆ, ಜ್ಯೋತಿಃಪುಂಜವಾಗುತ್ತಾರೆ. ಆದ್ದರಿಂದ ಅವರು ಬಿಜ್ಜಳನ ಕಡೆಯವರಿಂದ ಕೊಲೆಗೊಂಡರೋ, ಪ್ರಾಯೋಪವೇಶದ ಮೂಲಕ ಸಮಾಧಿಸ್ಥರಾದರೋ ಹೇಳಲರಿಯದು. ಲಿಂಗೈಕ್ಯರಾದರೆನ್ನುವುದು ಕಾವ್ಯರೀತಿಯಲ್ಲಿ ಮಾತ್ರವಲ್ಲ, ವಾಸ್ತವವಾಗಿಯೂ ಸತ್ಯ.

ಬಸವಣ್ಣನವರಂಥ ಅನುಭಾವಿಗಳ ಜೀವನದಲ್ಲಿ ಬಾಹ್ಯ ಘಟನೆಗಳಿಗಿಂತ ಆಂತರಿಕ ವಿಕಾರ ಬಹುಮುಖ್ಯವಾದುದು. ಆದರೆ ಅದು ಸಾಮಾನ್ಯರ ದೃಷ್ಟಿಗೆ ನಿಲುಕುವಂಥದಲ್ಲ, ಅನುಭಾವಿಯಾದವನಿಗೆ ಮಾತ್ರ ಅನುಭಾವಿಯ ಜೀವನ ರಹಸ್ಯ ಸುಸಂವೇದ್ಯವಾಗುತ್ತದೆ. ಬಸವಣ್ಣನವರು ಜನ್ಮತಃ ಸಿದ್ಧಪುರುಷರಾದ್ದರಿಂದಲೋ ಏನೋ ಕೇವಲ ನಾಲ್ಕೈದು ವರ್ಷಗಳಲ್ಲಿಯೇ ಸಿದ್ಧಿಯ ಶಿಖರವನ್ನೇರುತ್ತಾರೆ. ಅವರ ಆತ್ಮ ವಿಕಾಸದ ಹೆಜ್ಜೆ ಗುರುತುಗಳಂತಿರುವ ವಚನಗಳಲ್ಲಿ ಲಿಂಗಾಂಗ ಸಾಮರಸ್ಯ ಸಾಧನೆಯ ಕುರುಹುಗಳನ್ನು ಗುರುತಿಸಬಹುದು. ಸಾಧನೆ ಸಮಯದಲ್ಲಿ ಅವರು ಪಟ್ಟ ಶ್ರಮ, ಅನುಭವಿಸಿದ ಯಾತನೆ, ಎದುರಿಸಿದ ಅಡ್ಡಿ ಆತಂಕಗಳು, ಮೇಲಾಗಿ ಅವರ ಸಾಹಸ ಯಾತ್ರೆಯ ವಿವರಗಳು ಅವುಗಳಲ್ಲಿ ಸುಸ್ಪಷ್ಟವಾಗಿ ಪಡಿಮೂಡಿವೆ. ಅಂಟಿಕೊಂಡರೆ ಸಂಸಾರ ಬಂಧನ, ನಿರ್ಲಿಪ್ತತೆಯನ್ನು ಸಾಧಿಸಿದರೆ ಅದೇ ತಾರಣ ಸಾಧನವೆಂಬುದನ್ನವರು ಬಲ್ಲರು. 'ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ, ಎನ್ನುವನು ಕಾಯಯ್ಯ ಕಾಯಯ್ಯ; ಹುರುಳಿಲ್ಲ, ಹುರುಳಿಲ್ಲ'ವೆಂದು ಅಹೋರಾತ್ರಿ ಹಂಬಲಿಸುತ್ತಾರೆ. ನಾನ ಪರಿಯಲ್ಲಿ ಪೀಡಿಸುವ ಮಾಯೆಯಿಂದ ಪಾರು ಮಾಡುವಂತೆ ಸಂಗಮದೇವನಲ್ಲಿ ಮೊರೆಯಿಡುತ್ತಾರೆ. ಸಂಸಾರದಲ್ಲಿ ಮಗ್ನರಾದಷ್ಟೂ ಬಂಧನ ಬಿಗಿಯಾಗುತ್ತದೆ, ಜೀವನ ಪಾತಾಳಗಾಮಿಯಾಗುತ್ತದೆನ್ನುವುದನ್ನು ಅವರು ಬಲ್ಲರು. 'ಪಂಚೇಂದ್ರಿಯ ವಿಷಯವೆಂಬ ವಿಷದಿಂದ ಆನು ಮುಂದುಗೆಟ್ಟೆನಯ್ಯ; ಆನು ಹೊರಳಿ ಬೀಳುತ್ತಿರ್ದೆನಯ್ಯಾ' ಎಂದು ಆರ್ತಸ್ವರದಿಂದ ಗೋಳಾಡುತ್ತಾರೆ.

ಸತ್ಯಸಂಧತೆ ಮತ್ತು ನಿಷ್ಕಾಪಟ್ಯಗಳು ಬಸವಣ್ಣನವರ ಹುಟ್ಟುಗುಣ. ದೋಷ ದೌರ್ಬಲ್ಯಗಳನ್ನು ಮರೆಮಾಚದಿರುವುದೇ ಸತ್ಯಶೋಧಕನು ಕಲಿಯಬೇಕಾದ ಪ್ರಥಮ ಪಾಠವೆಂಬುದೂ, ತನ್ನ ದೌರ್ಬಲ್ಯವನ್ನರಿತಾಗಲೇ ಅವನಿಗೆ ಸತ್ಯದರ್ಶನವಾಗುತ್ತದೆಂಬುದೂ ಮಹಾತ್ಮರ ಜೀವನ ದರ್ಶನದಿಂದ ಸುಸ್ಪಷ್ಟವಾಗುತ್ತದೆ. ಟಾಲ್‌ಸ್ಟಾಯ್, ಗಾಂಧೀಜಿ ಈ ಮಾತಿಗೆ ನಿದರ್ಶನವಾಗಿದ್ದಾರೆ.

*ಎನ್ನ ನಡೆಯೊಂದು ಪರಿ; ಎನ್ನ ನುಡಿಯೊಂದು ಪರಿ;*
*ಎನ್ನೊಳಗೇನು ಶುದ್ಧವಿಲ್ಲ, ನೋಡಯ್ಯಾ*

ಎಂದು ಹೇಳಿಕೊಳ್ಳುವಂಥವರು, ಎನ್ನ ತಪ್ಪು ಅನಂತಕೋಟಿಯೆಂದು ಸಾರುವವರು ಜಗತ್ತಿನಲ್ಲಿ ಎಷ್ಟು ಜನರಿದ್ದಾರೆ?

*ಆನು ಮಾಡಿದ ತಪ್ಪನೆಣಿಸಿಹೆನೆಂದೊಡೆ ಗಣನೆ ಇಲ್ಲ*
*ನಡೆದು ತಪ್ಪುವೆ, ಮಾಡಿ ತಪ್ಪುವೆ,*
*ನೀಡಿ ತಪ್ಪುವೆ, ಕೂಡಿ ತಪ್ಪುವೆ*
*ಅರಿದು ತಪ್ಪುವೆ, ಮರೆದು ತಪ್ಪುವೆ*
*ಎನ್ನ ತಪ್ಪನೊಪ್ಪ ಮಾಡಿಕೊಂಬುದಲ್ಲದೆ*
*ಚಿತ್ತಕ್ಕೆ ತರಲಾಗದು ಕೂಡಲ ಸಂಗಮದೇವ.*

ತನ್ನ ತಪ್ಪು ತನಗೆ ತಿಳಿಯದವನು ಅಜ್ಞಾನಿ; ತಪ್ಪು ತಿಳಿದಾಗ ತಿದ್ದಿಕೊಳ್ಳುವವನೇ ಸುಜ್ಞಾನಿ. ತಿಳಿದಿದ್ದೂ ಮುಚ್ಚಿಕೊಳ್ಳುವವನು ದುರಹಂಕಾರಿ. ತಪ್ಪಿನ ಅರಿವೇ ನಿಜವಾದ ಅರಿವು. ಈ ಅರಿವುಳ್ಳವರೇ ಮಹಾತ್ಮರು. ಅಹಂಕಾರ ನಿರಸನವಾಗುವತನಕ ವಿವೇಕೋದಯವಾಗುವುದಿಲ್ಲ; ಆತ್ಮಶೋಧನೆ ಸಾಧ್ಯವಾಗುವುದಿಲ್ಲ. ಬಸವಣ್ಣನವರು ತಮ್ಮ ಮನಸ್ಸನ್ನು ಮೇಲಿಂದ ಮೇಲೆ ಅತ್ತಿಯ ಹಣ್ಣಿಗೆ, ಮರ್ಕಟನಿಗೆ, ಸೊಣಗನಿಗೆ ಹೋಲಿಸಿಕೊಳ್ಳುತ್ತಾರೆ. ತಾನು ಮಾತ್ರ ಶುದ್ಧ, ಮೇಧಾವಿ, ಉಳಿದವರೆಲ್ಲ ಅಶುದ್ಧರು ದಡ್ಡರು ಎಂಬ ಭಾವನೆ

ಸೊಕ್ಕಿನಿಂದ ಪ್ರೇರಿತವಾದುದು. ಅದಿರುವ ತನಕ ತಾನು ಆಡಿದ್ದೆ ಮಾತು, ನೆನೆದದ್ದೇ ದಾರಿ ಎಂಬ ಭಾವನೆಯ ಮಡುವಿನೊಳಗೆ ಕುಂದುಕೊರತೆಗಳು ಮನೆಮಾಡಿಕೊಂಡಿದ್ದು, ಮನುಷ್ಯನ ಮನಸ್ಸು ಊರ್ಧ್ವಮುಖಿವಾಗಲು, ಬೆಳಕಿನ ಕಡೆಗೆ ತಿರುಗಲು ಅವಕಾಶ ಕೊಡುವುದಿಲ್ಲ. ಅಂಥವರು ತಮ್ಮ ನಡೆಯನ್ನು ಸ್ವಚ್ಛಗೊಳಿಸುವ ಮುನ್ನ ಲೋಕದ ಡೊಂಕನ್ನು ತಿದ್ದಲು ಪ್ರಯತ್ನಿಸುತ್ತಾರೆ. 'ತನ್ನ ವಿಚಾರಸಲೊಲ್ಲದು; ಇದಿರ ವಿಚಾರಿಸಹೋಹುದೀ ಮನವು' ಎಂದು ನುಡಿಯುವಾಗ ಅವರಲ್ಲಿ ಚಿತ್ತ ಶುದ್ಧೀಕರಣದ ಹಂಬಲವಿದೆಯೋ ಹೊರತು ಆತ್ಮಾವಹೇಳನದ ನೈಚ್ಯ ಭಾವನೆ ಎಳ್ಳಷ್ಟೂ ಇಲ್ಲ.

ಚಿತ್ತ ಸಂಯಮ ಕೈಗೂಡದಿದ್ದಾಗ ತಮ್ಮ ನೆರವಿಗೆ ಬರುವಂತೆ ಅವರು ಕೂಡಲ ಸಂಗಮನನ್ನು ಕಾಡಿ ಬೇಡಿ ಮರೆಹೋಗುತ್ತಾರೆ. ಶಿವನ ಕೃಪೆಯೊಂದಿಲ್ಲದಿದ್ದರೆ ತಮ್ಮ ಪ್ರಾರ್ಥನೆ ಸಾರ್ಥಕವಾಗಲಾರದೆಂದೂ, ಅದೊಂದಿದ್ದರೆ ಕೊರಡು ಕೊನರುತ್ತದೆಂದೂ, ಬರಡು ಹಯನಾಗುತ್ತದೆಂದು ಅವರು ಬಲ್ಲರು.

*ಕಾಯ ವಿಕಾರ ಕಾಡಿಹುದಯ್ಯ;*
*ಮನೋವಿಕಾರ ಕಾಡಿಹುದಯ್ಯ!*
*ಇಂದ್ರಿಯ ವಿಕಾರ ಸುಳಿವುದಯ್ಯಾ!*
*ಸುಳುವಿನೊಳಗೆ ಸುಳಿಯುತ್ತಲಿದ್ದೇನೆ, ಸಿಲುಕಿಸದಿರಯ್ಯ;*
*ಅನ್ಯ ಚಿತ್ತವಿರಿಸದಿರಯ್ಯ; ನಿಮ್ಮ ಚಿತ್ತವಿರಿಸಯ್ಯ*

ಎಂದು ಅನನ್ಯ ಭಕ್ತಿಯಿಂದ ಬೇಡುತ್ತಾರೆ. ಶಿವ ಅವರಿಗೆ ದೂರದವನಲ್ಲ; ಅವರಿಬ್ಬರ ನಡುವಣ ಸಂಬಂಧ ಪತಿಪತ್ನಿಯರ ಅದ್ವೈತಭಾವವೇ ಹೊರತು ಭರ್ತೃ ಭೃತ್ಯರ ದ್ವೈತಭಾವವಲ್ಲ. ಮಹದೇವಿಯಷ್ಟೇ ಸಲುಗೆಯಿಂದ, ಮುಗ್ಧ ಮಧುರ ಭಾವದಿಂದ ಅವರು ಶಿವನನ್ನು ಓಲೈಸುತ್ತಾರೆ, ಪೀಡಿಸುತ್ತಾರೆ.

ಈ ಮಧುರ ಭಾವದ ಜತೆಗೆ ತಂದೆಮಕ್ಕಳ ವಾತ್ಸಲ್ಯಭಾವವೂ ತದಧಿಕ ಪ್ರಮಾಣದಲ್ಲಿದೆ. ತನ್ನ ಇಷ್ಟಾರ್ಥವನ್ನು ಪೂರೈಸಬೇಕಾದದ್ದು ತಂದೆಯ ಕರ್ತವ್ಯವೆಂದು ತಿಳಿದು ಅಧಿಕಾರವನ್ನು ಚಲಾಯಿಸುವ ಮಗನಂತೆ ಬಸವಣ್ಣನವರು ಶಿವನೊಡನೆ ಸ್ನೇಹ ಕಲಹಕ್ಕೂ ಸಿದ್ಧರಾಗಿದ್ದಾರೆ. ಹುಟ್ಟಿಸಿದ ಮೇಲೆ ಮಗುವಿನ ಪಾಲನೆ ಪೋಷಣೆಗಳು ತಂದೆಯ ಹೊಣೆಗಾರಿಕೆಯಷ್ಟೇ. ಅಶನ ವಸನಗಳಾಗಲೀ, ಆಟಿಕೆ ಪುಟಿಕೆಗಳಾಗಲೀ ಕೇಳಿದಾಗ ತಂದುಕೊಡದಿದ್ದರೆ ಮಗ ಅತ್ಯಂತ ವಿನಯ ವಿಧೇಯತೆಗಳಿಂದಲೇ ತಂದೆಯನ್ನು ಕುರಿತು 'ನನ್ನ ಬೇಡಿಕೆಯನ್ನು ಪೂರೈಸಲಾಗದಿದ್ದರೆ ನನ್ನನ್ನೇಕೆ ಹುಟ್ಟಿಸಿದೆ?' ಎಂದು ಪ್ರಶ್ನಿಸುವುದು ಸಹಜವೇ ಸರಿ. ಮಗ ಹೊಟ್ಟೆಗಿಟ್ಟಿಲ್ಲದೆ ನರಳುತ್ತಿದ್ದರೆ, ಬಟ್ಟೆಯಿಲ್ಲದೆ ನಡುಗುತ್ತಿದ್ದರೆ ಲೋಕ ತಂದೆಯನ್ನು ದೂರುತ್ತದೆಯೇ ಹೊರತು ಮಗನನ್ನಲ್ಲ. ಅಷ್ಟೇ ಶ್ರದ್ಧಾನಿಷ್ಠೆಗಳಿಂದ ಬಸವಣ್ಣನವರು ಶಿವನನ್ನು ಹಂಗಿಸುತ್ತಾರೆ.

*ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಳಿಯ ಬಿಟ್ಟೊಡೆ*
*ನಿಮ್ಮ ನಗುವರಯ್ಯ*
*ಶಿವ ಬಟ್ಟೆಯೊಳೆನ್ನನು ಇರಿಸಯ್ಯ, ಹರನೇ, ಹೊಲಬುಗೆಟ್ಟೆನು,*
*ಬಟ್ಟೆಯ ತೋರಯ್ಯ!*
*ಹುಯ್ಯಲಿಟ್ಟೆನು - ಗಣಂಗಳು ಕೇಳಿರಯ್ಯ,*
*ಕೂಡಲ ಸಂಗಮದೇವಯ್ಯನೆನ್ನ ಕಾಡಿಹನಯ್ಯ!*

ತಂದೆ ತನ್ನ ಬೇಡಿಕೆಯನ್ನು ಮನ್ನಿಸದಿದ್ದಾಗ ತನ್ನ ಪರವಾಗಿ ವಾದಿಸುವಂತೆ ಮಗ ತಾಯಿಯನ್ನೋ ಆಪ್ತ ಬಂಧುಗಳನ್ನೋ ಕೇಳಿಕೊಳ್ಳುವಂತೆ, ಅವರು ಗಣಂಗಳಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ. ಮಗನ ಮೊರೆಯನ್ನು ಲಾಲಿಸದ ತಂದೆ ತಾಯಿಯ ಬಿನ್ನಹಕ್ಕೆ ಕಟ್ಟುಬೀಳುವಂತೆ, ಶಿವ ಶರಣರ ಮಾತಿಗೆ ಕಿವಿಗೊಡಲೇಬೇಕು.

*ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ಪರಲೋಕದೂರನ?*
*ಏಕೆ ಹುಟ್ಟಿಸಿದೆ?*
*ಕೂಡಲ ಸಂಗಮದೇವಾ, ಕೇಳಯ್ಯ,*
*ಎನಗಾಗಿ ಮತ್ತೊಂದು ತುಮರನಿಲ್ಲವೇ?*

ಈ ಮೊರೆಯಲ್ಲಿ ತಬ್ಬಲಿಯ ತಾಪವಿದೆ, ದಾರಿಗೆಟ್ಟವನ ದುಗುಡವಿದೆ. 'ಏಕೆ ಹುಟ್ಟಿಸಿದೆ?' ಎನ್ನುವ ದ್ವಿರುಕ್ತಿಯಲ್ಲಿ ತಾಪದ ತೀವ್ರತೆಯಿದೆ, ವಾತ್ಸಲ್ಯದ ಆವೇಶವಿದೆ, ಆತ್ಮೀಯತೆ ಪ್ರಗಾಢತೆಯಿದೆ. 'ಎನಗಾಗಿ ತರುಮರನಿಲ್ಲವೆ?' ಎನ್ನುವ ಮಾತುಗಳಲ್ಲಿ ಅಸಹಾಯಕತೆಯ, ತನ್ನ ಬದುಕಿನ ಅಸಾರ್ಥಕತೆಯ ಕೊರಗು ಕೇಳಿಸುತ್ತದೆ.

ಪಂಚೇಂದ್ರಿಯಗಳು ಹತೋಟಿಗೆ ಬಾರದೆ, ವಿಷಯವಾಸನೆ ಉಲ್ಬಣಗೊಂಡು, ಸಂಯಮ ಶಿಥಿಲಗೊಳ್ಳುತ್ತಿದ್ದಾಗ

*ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ;*
*ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ;*
*ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ;*
*ನಿಮ್ಮ ಶರಣರ ಪಾದವಲ್ಲದೆ*
*ಅನ್ಯ ವಿಷಯಕ್ಕೆಳಸದಂತೆ ಇರಿಸು, ಕೂಡಲ ಸಂಗಮದೇವಾ*

ಎಂದು ಪರಿಪರಿಯಾಗಿ ಅಲ್ಪರಿಯುತ್ತಾರೆ. ತಮ್ಮ ಕೊರಗಿಗೆ ಶಿವ ಕಿರಿಗೊಡಲಿಲ್ಲವೆಂದು ಅರಿವಾದಾಗ ಅವರು 'ನಿನಗಿನಿತು ಕರುಣವಿಲ್ಲ, ನಿನಗಿನಿತು ಕೃಪೆಯಿಲ್ಲ'ವೆಂದು ಕಿನಿಯುತ್ತಾರೆ. 'ನೀ ಹುಟ್ಟಿಸಿದಲ್ಲಿ ಹುಟ್ಟದೆ, ನೀ ಕೊಂದಲ್ಲಿ ಸಾಯದೆ ಎನ್ನ ವಶವೇ ಅಯ್ಯ' ನೀವಿರಿಸಿದರಲ್ಲಿರದೆ ಎನ್ನ ವಶವೇ ಅಯ್ಯ' ಎಂದು ಶರಣಾಗತರಾದಾಗಲೂ ಶಿವ ಕರುಣೆದೋರದಿದ್ದರೆ ಶರಣ ಸಿಡುಕುವುದು ತಪ್ಪೇನಲ್ಲ. ಸುತ್ತಮುತ್ತಣ ಪರಿಸರವನ್ನು ಬೈದೇನು ಪ್ರಯೋಜನ? ಅದಕ್ಕೆ ಬದಲಾಗಿ ಸದ್ಬುದ್ಧಿ ನೀಡಬಾರದಾಗಿತ್ತೆ?

(ಮುಂದುವರಿಯುತ್ತದೆ) ★







# ಪರಸ್ಪರ ಪ್ರತ್ಯಕ್ಷ ಅನುಭವ ಮಂಟಪಗಳ ಅವಶ್ಯಕತೆಗಳು

– ಡಾ. ಎಸ್.ಆರ್. ಸಿದ್ದಲಿಂಗಪ್ಪ
156, 6ನೇ 'ಸಿ' ಅಡ್ಡರಸ್ತೆ, ಟೀಚರ್ಸ್ ಕಾಲೋನಿ,
ನಾಗರಬಾವಿ, ಬೆಂಗಳೂರು – 560 072.
ದೂರವಾಣಿ : 57606338

ಹನ್ನೆರಡನೆಯ ಶತಮಾನದ ಶರಣಕ್ರಾಂತಿಯ ಫಲಶೃತಿಗಳಲ್ಲಿ ಒಂದಾದ್ದು, ಪರಮುಖವಾದದ್ದು ಅನುಭವಮಂಟಪದ ಸಾಕಾರತೆ. ಇಂತಹ ಒಂದು ಸಂಘಟನೆ ಇರಲೇ ಇಲ್ಲ, ಅದು ಏನಿದ್ದರೂ ಕಾಲ್ಪನಿಕ ಎಂಬ ವಾದಗಳನ್ನು ಅನೇಕ ಪ್ರಸಿದ್ಧ ವಿದ್ವಾಂಸರು ಪ್ರತಿಪಾದಿಸಿರುವುದು ಎಲ್ಲರಿಗೂ ತಿಳಿದಿರುವ ವಿಚಾರ. ಆದರೆ ಶೂನ್ಯ ಸಂಪಾದನೆಗಳಲ್ಲಿ ಉಪಯೋಗವಾಗಿರುವ ಸುಮಾರು ೧೫೪೩ ವಚನಗಳು ಪರಸ್ಪರ ಶರಣರು ಒಬ್ಬರನ್ನೊಬ್ಬರು ಉದ್ದೇಶಿಸಿ ಪ್ರತಿಪಾದಿಸಿರುವ ವಿಚಾರಗಳನ್ನೊಳಗೊಂಡವುಗಳಾಗಿವೆ. ಈಗಿನ ನಮ್ಮ ಕಲ್ಪನೆಯಂತೆ, ಯಾವುದೇ ಸಂಘ ಸಂಸ್ಥೆಗಳು ಇದ್ದಿಲ್ಲದಿರಬಹುದು, ಆದರೆ ಶರಣರು ಪರಸ್ಪರ ತಮ್ಮ ವಿಚಾರಗಳನ್ನು ಚರ್ಚಿಸಿ, ನಿರ್ಣಯಿಸಿ ಪ್ರತಿಪಾದನೆ ಮಾಡಿರುವುದು ಅತ್ಯಂತ ಸ್ಪಷ್ಟವಾದ್ದರಿಂದ ಈ ಅನುಭವಮಂಟಪಗಳಾಗಲಿ, ಮಹಾಮನೆಗಳಾಗಲಿ ಶರಣ ಹೃದಯಗಳಲ್ಲಿ ಇತ್ತೆಂಬ ವಿಚಾರಗಳ ಬಗ್ಗೆ ಸಂಶಯಪಡಬೇಕಾಗಿಲ್ಲ. ಮತ್ತೊಂದು ವಿಚಾರವೂ ಸಹ ಈ ಅನುಭವ ಮಂಟಪಗಳು ಶರಣರ ಹೃದಯಗಳಲ್ಲಿ ಇತ್ತು ಎಂಬುದರ ಬಗ್ಗೆ ಸಮರ್ಥನೆ ಕೊಡುತ್ತದೆ. ಅದುವೇ ಯಾವುದೇ ಒಬ್ಬ ಶರಣರ ವಚನಗಳನ್ನು ಎಲ್ಲಾ ಆಯಾಮದ ಚಿಂತನೆಗಳಿಗೆ ಒದಗಿಸಿದರೆ ಅದರಿಂದ ಬರುವಂತಹ ನಿರ್ಣಯಗಳೇ ಮತ್ತೆ ಇತರ ಎಲ್ಲಾ ಶರಣರ ವಚನಗಳನ್ನು ಅಧ್ಯಯನ ಮಾಡಿದಾಗ ದೊರಕುತ್ತವೆ. ಇಂತಹ ಸಾಮ್ಯಗಳು ಸಾಧ್ಯವಾಗುವುದು ಮತ್ತು ಅದರ ಕಾರಣಗಳು, ಹನ್ನೆರಡನೆಯ ಶತಮಾನದ ಶರಣರು ಅನುಸರಿಸಿರಬಹುದಾದ ಪರಸ್ಪರ ಚರ್ಚೆಗಳೇ ಕಾರಣಗಳಾಗಿವೆ.

ಇನ್ನು ಕೆಲವು ವಿಚಾರಗಳು ಸಹ ಅನುಭವಮಂಟಪಗಳ ಹಿನ್ನಲೆಯ ಚಿಂತನೆಗಳಲ್ಲಿ ಪ್ರಸ್ತುತವಾಗುತ್ತದೆ. ಅಲ್ಲಿ ಸಮಾಗಮವಾಗಿದ್ದ ಶರಣರು ನಾನಾ ಹಿನ್ನೆಲೆಗಳಿಂದ ಬಂದಂತಹ ವ್ಯಕ್ತಿಗಳಾಗಿದ್ದರು ಮತ್ತು ಅವರುಗಳು ನಾನಾ ಕಡೆಗಳಿಂದ ಬಂದವರಾಗಿದ್ದು; ಪುರುಷ, ಸ್ತ್ರೀಭೇದವಿಲ್ಲದೆ, ಜಾತಿ ಭೇದವಿಲ್ಲದೆ, ನಾನಾ ಉದ್ಯೋಗ ಸ್ತರಗಳಿಂದ ವಿಭಿನ್ನ ವ್ಯಕ್ತಿಗಳಾಗಿದ್ದರೂ ಸಹ; ಕೊನೆಯಲ್ಲಿ ಎಲ್ಲರೂ ಜ್ಞಾನಿಗಳಾಗಿ ಒಂದೇ ಮಟ್ಟದಲ್ಲಿ ವಿಚಾರ ಪ್ರತಿಪಾದನೆಗಳನ್ನು ತಮ್ಮ ವಚನಗಳ ಮೂಲಕ ಮಾಡಿದ್ದಾರೆ. ಇಂತಹ ಒಂದು ''ಜ್ಞಾನಗಳಲ್ಲಿನ ಸಮಾನತೆ'' ಬರುವುದು ಸಾಧ್ಯವಾದದ್ದು ಅನುಭವಮಂಟಪಗಳಂತಹ ಸಂದರ್ಭಗಳು ಎಂಬುದರಲ್ಲಿ ಸಂಶಯವಿಲ್ಲ. ಜ್ಞಾನಗಳು ಪರಸ್ಪರ ಚರ್ಚಿತವಾಗಿ; ಅನುಭಾವಗಳು ಸಹ ಪರಸ್ಪರ ವಿನಿಮಯವಾಗಿ, ತಿಳಿದವರು; ತಿಳಿಯದವರು ಎಂಬ ವ್ಯತ್ಯಾಸಗಳಿಲ್ಲದೆ ಭಾಗವಹಿಸಿದ ಎಲ್ಲರೂ ಜ್ಞಾನಿಗಳಾದರು. ಇದಕ್ಕೆ ಪ್ರಮುಖ ಕಾರಣ ಶರಣಕ್ರಾಂತಿಯಲ್ಲಿ ''ತಿಳಿದವರು'' ಅನೇಕ ಜನ ಇದ್ದದ್ದು ಪ್ರಮುಖವಾದ ಕಾರಣಗಳಾಗಿವೆ. ಆದ್ದರಿಂದಲೇ ''ಬಸವಣ್ಣನವರು'' ಆಶಯವಾದ ''ಜ್ಞಾನದ ಬಲದಿಂದ ಅಜ್ಞಾನದ ಕೇಡಾಗಿ'' ಕೂಡಲಸಂಗನ ಶರಣರ ಅನುಭಾವದ ಬಲದಿಂದ ಅಲ್ಲಿದ್ದವರ ಎಲ್ಲರ ಭವದ ಕೇಡಾಗಿತ್ತು. ಈ ಕ್ರಮಗಳು ಈಗಿನ ಕಾಲದಲ್ಲಿ ಪ್ರಸ್ತುತವಿರುವ ವೇದಿಕೆಯ ಭಾಷಣಗಳಾಗಿರಲಿಲ್ಲ. ವಿಷಯಗಳನ್ನು ಅನುಭಾವಗಳನ್ನು ಪರಸ್ಪರ ಚರ್ಚಿಸಿದಾಗ ಅದರಿಂದ ವಿಚಾರಗಳಿಗೆ ಸಮರ್ಥನೆ ಸಾಧ್ಯವಾಗಿ, ವ್ಯಕ್ತಿಗಳು ಜ್ಞಾನಿಗಳಾಗುವ ಅವಕಾಶಗಳು ಹೆಚ್ಚಾಗಿದ್ದವು. ವೇದಿಕೆಯ ಭಾಷಣಗಳಾಗಲಿ ಲೇಖನಗಳಾಗಲಿ, ಗ್ರಂಥಗಳಾಗಲಿ; ಫಲಾನುಭವಿಗಳಿಗೆ ಎಷ್ಟು ಪ್ರಯೋಜನವಾಗಿದೆ ಎಂಬ ಅಂಶ ವಿವೇಚನೆಗೆ ಸಿಗದೆ ಹಾಗೆಯೇ ಉಳಿಯುತ್ತದೆ. ವೇದಿಕೆಗಳಿಂದ ನಡೆಯುವ ಪ್ರಾಧ್ಯಾಪನ ವಿದ್ಯಾರ್ಥಿಗಳಲ್ಲಿ ಜ್ಞಾನಗಳು ಎಷ್ಟಾಗಿದೆ ಎಂದು ತಿಳಿಯಲು ಪರೀಕ್ಷೆಗಳು ಇರುತ್ತವೆ. ಆದರೆ ಈ ರೀತಿಯ ಆಧ್ಯಾತ್ಮ ಜ್ಞಾನಗಳ ಅನುಭಾವಗಳ ಪ್ರತಿಪಾದನೆ, ವೇದಿಕೆಯ ಮೂಲಕ ಗ್ರಂಥಗಳ ಮೂಲಕ ಮಾಡುವಾಗ ಅವು ಎಷ್ಟು ಫಲಾನುಭವಿಗಳಿಗೆ ತಲುಪಿದೆ ಎಂದು ತಿಳಿಯುವುದು ಕಷ್ಟಕರವಾದ ವಿಚಾರ. ಅಕ್ಷರಸ್ಥರು, ಎಲ್ಲರಿಗೂ ಹೊಂದುವಂತಹ; ಎಲ್ಲಾ ಕಾಲಕ್ಕೂ ಸರಿಹೊಂದುವ,

ನಿರ್ಣಯಕಾರಿಯಾಗಿ, ಸಮರ್ಥ ಪರಿಣಾಮಕಾರಿ, ಪ್ರತಿಫಲಗಳನ್ನು ಕೊಡುವಂತಹುದೇ ಹನ್ನೆರಡನೆಯ ಶತಮಾನದ ಶರಣರು ಆಚರಿಸಿದ ಅಧ್ಯಾತ್ಮಪರವಾದ ''ಪರಸ್ಪರ ಪ್ರತ್ಯಕ್ಷ ಅನುಭಾವಮಂಟಪಗಳೇ'' ಆಗಿದೆ. ಇದು ಇವತ್ತಿನ ದಿನಮಾನಗಳ ಅವಶ್ಯಕತೆಯನ್ನು ಸರ್ವವಿಧದಲ್ಲೂ ಪೂರೈಸುತ್ತದೆ. ಮುಂದಿನ ದಿನಮಾನಗಳಿಗೂ ಅನುಕೂಲಕರವಾದವುಗಳಾಗಿವೆ. ಈ ವಿಚಾರದ ಗ್ರಹಿಕೆಯೇ ಈಗಿನ ಪ್ರಮುಖ ಸಮಸ್ಯೆಯಾಗಿದೆ.

### *ಬೇಕಾದ ಹಿನ್ನೆಲೆಗಳು*

ಇವತ್ತಿನ ಸಂದರ್ಭದಲ್ಲಿ ದೊರಕಿರುವ ಸಮಗ್ರ ವಚನಗಳ ಸಂಪುಟದ (೧೫ ಸಂಪುಟಗಳು) ಎಲ್ಲಾ ವಚನಗಳು; ಅಥವಾ ಬಹುತೇಕ ವಚನಗಳು ಹದಿನೈದನೆಯ ಶತಮಾನದಿಂದ ನಾನಾ ರೀತಿಯ ''ಸ್ಥಲಗಳಿಗೆ ಅನ್ವಯವಾಗಿ'' ಸಂಕಲನ ಗ್ರಂಥಗಳಾಗಿ ನಮಗೆ ಈಗ ದೊರಕುತ್ತಿವೆ. ಈ ಸಂಕಲನ ಯುಗದ ಆಶಯ ವಚನಾಧಾರಿತವಾದ ಒಂದು ಷಟ್‌ಸ್ಥಲ ಸಿದ್ಧಾಂತ ಗ್ರಂಥದ ಆಶಯವಾಗಿರಬಹುದೆಂದು ಅವಶ್ಯಕವಾಗಿ ತಿಳಿಯಬಹುದು. ಹನ್ನೆರಡನೆಯ ಶತಮಾನದ ಶರಣರಿಗೆ, ಸಂಪ್ರದಾಯ ಮತ್ತು ಆಚರಣೆಗಳ ಮೂಲಕ ಮತ್ತು ಕೆಲವು ಗ್ರಂಥಗಳ ಮೂಲಕ ದೊರೆತ ಷಡುಸ್ಥಲ ಸಿದ್ಧಾಂತಗಳನ್ನು ತಿಳಿದು, ಆಚರಿಸಿ, ಅನುಭಾವಗಳನ್ನಾಗಿಸಿ ದಾಖಲಿಸಿರುವ ವಚನಗಳು ಈಗ ನಮಗೆ ದೊರಕಿರುವುದರಲ್ಲಿ ಯಾವುದೇ ಸಂಶಯಗಳಿಲ್ಲ. ಕಾರಣ ಅನೇಕ ವಚನಕಾರರ ವಚನಗಳಲ್ಲಿ, ಶರಣರು ತಮ್ಮ ವಿಚಾರಗಳ ಸಮರ್ಥನೆಗೆ ಅನೇಕ ಗ್ರಂಥಗಳ ಉಲ್ಲೇಖಗಳನ್ನು ಮಾಡಿರುವುದನ್ನೂ ಕಾಣುತ್ತೇವೆ. ಮತ್ತೊಂದು ಬಹಳ ಪ್ರಮುಖವಾದ ವಿಚಾರ ಹನ್ನೆರಡನೆಯ ಶತಮಾನದ ಶರಣರು ತಮ್ಮ ಅಧ್ಯಾತ್ಮ ಸಾಧನೆಗಳಿಗೆ ಬೇಕಾದ ವಿಚಾರಗಳಲ್ಲಿ ಮಾತ್ರ ಲೌಕಿಕ ಆಯಾಮದ ಸಾಮಾಜಿಕ ಚಿಂತನೆಗಳನ್ನು ಮಾಡಿ ಪ್ರಗತಿ ಸಾಧಿಸಿದ್ದಾರೆ ಎಂಬ ಆಯಾಮದ ಚಿಂತನೆ. ಆದರೆ ಇಂದಿನ ಕಾಲಮಾನಗಳಲ್ಲಿ ಕೇವಲ ಸಾಮಾಜಿಕ ಆಯಾಮದ ಚಿಂತನೆಗಳಿಗಷ್ಟೇ ವಚನಗಳನ್ನು ಪ್ರತಿಪಾದಿಸಿ, ಅವುಗಳ ಹಿನ್ನೆಲೆಯಲ್ಲಿನ ಪ್ರಮುಖವಾದ ಅಧ್ಯಾತ್ಮಜ್ಞಾನಗಳ ''ಸಂಪೂರ್ಣ ನಿರಾಕರಣೆ'' ಜನರನ್ನು ಜ್ಞಾನಿಗಳನ್ನಾಗಿ ಮಾಡಲು ಏನೂ ಪ್ರಯತ್ನ ಎಲ್ಲೂ ನಡೆಯದಿರುವ ವಿಚಾರ; ನಿರಾಶಾದಾಯಕವಾಗಿದೆ. ವಚನಸಾಹಿತ್ಯ, ಪರಂಪರೆಗಳನ್ನು ಉಳ್ಳ ಜನರ ಯಾರೂ ವಚನಗಳಲ್ಲಿನ ಅಧ್ಯಾತ್ಮ ಜ್ಞಾನಗಳನ್ನು ಪ್ರತಿಪಾದಿಸಿ ಚರ್ಚಿಸಿ, ಅವುಗಳ ಅಂತರ್ಯಗಳನ್ನು ಅನುಭಾವಗಳಿಗೆ ಅಳವಡಿಸಿಕೊಂಡು ಪರಸ್ಪರ ಚರ್ಚೆಗೆ ಒದಗಿಸಿ, ಜ್ಞಾನಿಗಳಾಗುವ ಸಂದರ್ಭಗಳು ಎಲ್ಲೂ ಕಾಣಸಿಗುತ್ತಿಲ್ಲ, ಇನ್ನೂ ಸಹ ವಚನ ಪ್ರತಿಪಾದಿತವಾದ ''ತ್ರಿವಿಧಗಳ'' ಅಧ್ಯಾತ್ಮ ಜ್ಞಾನಗಳು, ಸರಿಯಾಗಿ ಸಮಾಜದಲ್ಲಿ ಸಾಮಾನ್ಯಮಟ್ಟದಲ್ಲೂ ಸಹ ತಿಳಿವಳಿಕೆಗಳಿಗೆ ದೊರೆತಿಲ್ಲ. ಇನ್ನು ಸಾಧನೆಯ ಮಟ್ಟದ ಅಧ್ಯಾತ್ಮ ಜ್ಞಾನಗಳಾಗುವ ಪಾದೋದಕ, ಪ್ರಸಾದಗಳ ವಿಚಾರದಲ್ಲಿ ಜನಗಳಲ್ಲಿ ಅನೇಕ ವಿಧವಾದ ಸಂಶಯಗಳು ಯಥಾವತ್ತಾಗಿ ಮನಗಳಲ್ಲಿ ವಿಷಧೀಕರಣಗಳಿಲ್ಲದೆ ಗೊಂದಲಗಳಿಗೆ ಕಾರಣಗಳಾಗಿವೆ. ಈ ''ಪರಸ್ಪರ ಪ್ರತ್ಯಕ್ಷ ಅನುಭವಮಂಟಪಗಳ'' ಅವಶ್ಯಕತೆ ಈ ವಿಚಾರಗಳಂತಹ ಅಧ್ಯಾತ್ಮ ಚಿಂತನೆಗಳಿಗೆ, ಸಮಸ್ಯೆಗಳಿಗೆ ಪರಿಹಾರವಾಗಿ, ಸಮಸ್ತ ಜನರು ಜ್ಞಾನಿಗಳಾಗುವ ಅವಕಾಶಗಳನ್ನು ಹೊಂದಿದೆ.

### *ಜ್ಞಾನಗಳು*

ಸಾಧಕನು ತನ್ನ ದೇಹದಲ್ಲೇ ದೇವರನ್ನೂ ''ಶಿವ''ನನ್ನು ಕಾಣುವ ಪ್ರಕ್ರಿಯೆಗಳೇ ವಚನಗಳ ಅಧ್ಯಾತ್ಮ ಆಯಾಮದ ಚಿಂತನೆಗಳಾಗಿವೆ. ಈ ಪ್ರಕ್ರಿಯೆಗಳ ಪ್ರತಿಪಾದನೆಗಳನ್ನು ಕೇವಲ ತ್ರಿವಿಧಗಳ ಹಿನ್ನಲೆಯಲ್ಲೇ ವಚನಗಳಲ್ಲಿ ಶರಣರು ತಮ್ಮ ಚಿಂತನೆಗಳನ್ನು ನಡೆಸಿದ್ದಾರೆ. ವಚನಗಳ ಆಶಯದಲ್ಲಿ; ತ್ರಿವಿಧಗಳಾದ ಸಾಧಕನಲ್ಲಿನ ಗುರು, ಲಿಂಗ, ಜಂಗಮಗಳು ಅಂತರಂಗ, ಬಹಿರಂಗಗಳಲ್ಲಿ ಪ್ರತಿಪಾದಿತವಾಗಿವೆ. ವಚನಕಾರರು ಸಾಧಕನ ದೇಹದಲ್ಲಿನ ನಾನಾ ಸ್ಥಾನೀಕ ನೆಲೆಗಳನ್ನು ದೈವದ ಹೆಸರುಗಳ ಮೂಲಕ ಗುರುತಿಸಿದ್ದಾರೆ. ೩೬ ತತ್ತ್ವಗಳ ಅನ್ವಯಗಳನ್ನು ಈ ದೇವರುಗಳ ಹೆಸರಿನಲ್ಲಿ ಗುರುತಿಸಿದ್ದಾರೆ. ಇದಿಷ್ಟೂ ಪ್ರತಿಪಾದನೆಗಳಾದರೆ, ಇನ್ನು ಸಾಧನೆಗಳಿಗೆ, ಷಟ್‌ಚಕ್ರಭೇದ ಕುಂಡಲಿಯೋಗ; ಮನಮಗ್ನಯೋಗ; ಮಿಶ್ರಾರ್ಪಣ ಮುಂತಾದ ಪ್ರಕ್ರಿಯೆಗಳನ್ನು ಪ್ರತಿಪಾದಿಸಿದ್ದಾರೆ. ಇವೆಲ್ಲಕ್ಕೂ ಹಿನ್ನೆಲೆಗಳಾಗಿ ಸಾಧಕನು ತನ್ನ ಮನಸ್ಸಿನ ಅಹಂಕಾರಗಳನ್ನು ನಿವಾರಿಸಲು ಬೇಕಾದ ಉಪಾಯಗಳಾಗಿ ''ಸತ್ಯ ಶುದ್ಧ ಕಾಯಕ ದಾಸೋಹಗಳನ್ನು'' ಪ್ರತಿಪಾದಿಸಿ, ಸಾಧಕನು ಶುದ್ಧಾಂತಃಕರಣ ದೇಹಿಯಾಗಿ ತನ್ನ ಅಧ್ಯಾತ್ಮ ಜ್ಞಾನಗಳನ್ನು ಸಾಧಿಸಲು; ಇಹದಲ್ಲಿ ಸಲ್ಲುವ ಪರದಲ್ಲಿಯೂ ಸಲ್ಲುವ ಉಪಾಯಗಳನ್ನು ತಮ್ಮ ವಚನಗಳಲ್ಲಿ ಯಾರಿಗೂ ಸಂಶಯಬರದ ರೀತಿಗಳಲ್ಲಿ ನಿರ್ಣಯಗಳಾಗಿ ತಿಳಿಸಿದ್ದಾರೆ. ಈ ವಿಚಾರಗಳು ಮತ್ತು ಅನೇಕ ಇವಕ್ಕೆ ಸಂಭವಿಸಿದವುಗಳು ಎಲ್ಲರನ್ನು ಸಾಮಾನ್ಯ ಜನ ಸಮಾಜದಲ್ಲಿ ತಿಳಿದು ಜ್ಞಾನಿಗಳಾಗುವುದು ಯಾವಾಗ? ಮತ್ತು ವಚನಗಳಿಂದ ದೊರಕುತ್ತಿರುವ





ಮಾರ್ಗದರ್ಶನಗಳು ಸಾಮಾನ್ಯ ಜನರನ್ನು ತಲುಪಿ, ಇಡೀ ಸಮಾಜವೇ ಜ್ಞಾನಿಗಳಾಗಬೇಕಾಗಿದೆ. ಅದೇ ರಚನಕಾರರ ಆಶಯವೂ ಕೂಡ ಆಗಿದೆ. ಬಸವಾದಿ ಶರಣರ ಆಶಯಗಳಾದ ಜನರೇ ಸ್ವತಃ ಜ್ಞಾನಿಗಳಾಗಬೇಕೆಂಬ ವಿಚಾರಗಳು ಎಲ್ಲೆಲ್ಲೂ ಸಾಕಾರವಾಗಬೇಕಾದರೆ ಇರುವುದು ಒಂದೇ ಒಂದು ಉಪಾಯ ಪರಸ್ಪರ ಪ್ರತ್ಯಕ್ಷ ಅನುಭವಮಂಟಪಗಳು ಮತ್ತು ಅವುಗಳಲ್ಲಿನ ''ನೇರ ಚರ್ಚೆಗಳು''. ಖಡಾಖಂಡಿತವಾಗಿ, ವೇದಿಕೆಯ ಭಾಷಣಗಳಲ್ಲ; ಅಥವಾ ಗ್ರಂಥಸ್ಥ; ಅಥವಾ ಲೇಖನಗಳ ಸರಮಾಲೆಯ ನಿಯತಕಾಲಿಕೆಗಳಲ್ಲ. ಇದರಲ್ಲಿ ಯಾವುದೇ ಸಂಶಯಗಳು ಯಾರಿಗೂ ಇಲ್ಲವೆಂದೇ ತಿಳಿಯಲಾಗಿದೆ.

### *ಮುಂದಿನ ದಾರಿಗಳು*

ಈಗಿನ ಸಮಾಜದ ಪರಿಸ್ಥಿತಿಗಳು ಹನ್ನೆರಡನೆಯ ಶತಮಾನಗಳಿಗೆ ಹೋಲಿಸಿದರೆ ಬಹಳ ವ್ಯತ್ಯಾಸಗಳಿವೆ. ಆದರೆ ದೇಹದಲ್ಲೇ 'ಶಿವ'ನನ್ನು ಕಾಣವ ಪ್ರಕ್ರಿಯೆಗಳಿಗೆ ಯಾವುದೇ ತೊಂದರೆಗಳಿಲ್ಲ. ಈಗಿನ ಕಾಲದಲ್ಲಿನ ಎಲ್ಲಾ ಸಂಪರ್ಕ ಮಾಧ್ಯಮಗಳ ಅನುಕೂಲತೆಗಳಿಂದ, ಈ ಪರಸ್ಪರ ಪ್ರತ್ಯಕ್ಷ ಅನುಭವ ಮಂಟಪಗಳ ಚರ್ಚೆಗಳನ್ನು ಪ್ರತ್ಯಕ್ಷವಾಗಿ ನೇರವಾಗಿಯೂ, ಮಾಧ್ಯಮಗಳ ಮೂಲಕ ಎಲ್ಲಿದ್ದರೂ ನಡೆಸಬಹುದಾಗಿದೆ. ಈ ಮೂಲಕ ಸಾಧಕನು ಎಲ್ಲೇ ಇದ್ದರೂ ತನಗೆ ಬೇಕಾದ ಜ್ಞಾನಗಳನ್ನು ಪಡೆದು ತನ್ನ ಸಾಧನೆಗಳಲ್ಲಿ ತೊಡಗಿರಬಹುದು. 'ಮನ'ವೇ ಲಿಂಗವಾಗಬೇಕಾಗಿರುವುದರಿಂದ, ಅದೇ ಮನವನ್ನು ಲೌಕಿಕದಲ್ಲೂ, ಅಧ್ಯಾತ್ಮದಲ್ಲೂ ಸರಿಯಾದ ನೆಲೆಗಳಲ್ಲಿ ತೊಡಗಿಸಿಕೊಂಡು; ಇಹದ ಸುಖಗಳನ್ನು ಪರದ ಧನ್ಯತೆಗಳನ್ನೂ ಎರಡನ್ನು ಸಾಧಿಸುವ ವಚನಗಳ ಆಶಯಗಳನ್ನೂ ಸಾಕ್ಷಾತ್ಕಾರಮಾಡಿಕೊಳ್ಳುವ ಸಾಧಕರಾಗಿ, ವಚನಪರಂಪರೆಗಳನ್ನು ಉಳ್ಳ ಸಮಾಜದಲ್ಲಿ ಜನ ಪ್ರಯತ್ನಿಸಬಹುದು.

ಆದರೆ ಈ ಎಲ್ಲಾ ಆಯಾಮದ ಚಿಂತನೆಗಳಿಗೆ ಬೇಕಾಗಿರುವುದು ಒಂದು ಸಮಗ್ರ ಚಿಂತನೆಯ ಷಡುಸ್ಥಲ ಸಿದ್ಧಾಂತ ಪ್ರತಿಪಾದನಾ ಗ್ರಂಥ ಮತ್ತು ಈಗ ದೊರಕಿ'ರುವ ಎಲ್ಲಾ ವಚನಗಳ ಸಮರ್ಥನೆ ಈ ಷಡುಸ್ಥಲ ಸಿದ್ಧಾಂತಗಳ ಹಿನ್ನಲೆಗಳಲ್ಲಿನ ವ್ಯವಸ್ಥಿತವಾದ ಪ್ರತಿಪಾದಿತವಾದ ಅನುಭಾವದ ಗ್ರಂಥ. ಇಂತಹ ಸಂದರ್ಭಗಳ ನಿರ್ಮಾಣಕ್ಕೆ ಎಲ್ಲಾ ವಿದ್ವಾಂಸರು, ಸಂಘ ಸಂಸ್ಥೆಗಳು, ಮಠಮಾನ್ಯಗಳು, ಸ್ವಾಮಿಗಳು, ಜ್ಞಾನಿಗಳು ವಿವೇಕಿಗಳು, ಸಾಧಕರು ಪ್ರಯತ್ನಪಡಬೇಕಾಗಿದೆ. ಈಗಿನ ಜನಾಂಗ ಮತ್ತು ಮುಂದಿನ ಪೀಳಿಗೆಗಳು ಜ್ಞಾನಸ್ಥರಾಗಿ, ಬದುಕಿ, ಬಾಳಿ, ತೇಜಸ್ವಿಗಳಾಗಿ ಯಶಸ್ವಿಗಳಾಗಬೇಕಾದರೆ, ಈ ಲೇಖನದಲ್ಲಿ ಪ್ರತಿಪಾದಿತವಾಗಿರುವ ಎಲ್ಲಾ ವಿಚಾರಗಳ ಬಗೆಗೆ ಚಿಂತನಗಳು ನಡೆದು ಪ್ರಯತ್ನಗಳ ಆವಿಷ್ಕಾರಗಳಿಗೆ ಕಾರಣವಾಗಬೇಕಾಗಿದೆ. ಈ ಹಿನ್ನಲೆಗಳಲ್ಲಿ ಇನ್‌ಸ್ಟಿಟ್ಯೂಟ್ ಆಫ್ ವೀರಶೈವ ಸ್ಟಡೀಸ್ ಮೇಲಿನ ಎರಡು ಆಯಾಮದ ಗ್ರಂಥಗಳ ಆವಿಷ್ಕಾರಗಳಿಗೆ ತನ್ನದೇ ಆದ ಪ್ರಯತ್ನಗಳನ್ನು ನಡೆಸಿ, ಸಾಕಷ್ಟು ಪ್ರಗತಿಗಳನ್ನು ಸಾಧಿಸಿದೆ ಎಂಬುದು ಸುತ್ತ್ಯವಾದ ವಿಚಾರಗಳಾಗಿವೆ. ಹನ್ನೆರಡನೆಯ ಶತಮಾನದ ಶರಣರ ವಚನಗಳು ಮತ್ತು ತದನಂತರದ ಕಾಲಗಳಲ್ಲಿ ಬಂದಿರುವ ವಚನಗಳು ''ಕೇವಲ ಜ್ಞಾನಾಧಾರಿತಗಳಾದ್ದರಿಂದ'' ಈ ಪರಸ್ಪರ ಪ್ರತ್ಯಕ್ಷ ಅನುಭವಮಂಟಪಗಳಲ್ಲಿನ ಜ್ಞಾನಗಳು ಸಹ ಸಂಪ್ರದಾಯ ಸಮಯ, ಪರಂಪರೆಗಳ ತಾಕಲಾಟಗಳಿಗೆ ಸಿಲುಕದೆ ಕೇವಲ ಜ್ಞಾನಾಧಾರಿತ ಹಿನ್ನೆಲೆಗಳಲ್ಲೇ ಪ್ರತಿಪಾದಿತವಾಗಿ ಸಾರ್ವಕಾಲಿಕ ನೆಲೆಗಳಲ್ಲಿ ಅಭಿವ್ಯಕ್ತಿಗೊಳ್ಳಬೇಕು. ಇದು ಇಂದಿನ ಮತ್ತು ಮುಂದಿನ ಕಾಲಮಾನಗಳಲ್ಲಿನ ವಚನಾಭ್ಯಾಸಿಗಳ ಅವಶ್ಯಕತೆಯಾಗಿದೆ ಎಂಬ ಪ್ರತಿಪಾದನೆಯೇ ಈ ಲೇಖನದ ಉದ್ದೇಶ್ಯ. ಅಂತಹ ಒಂದು ಕಾಲ ಬಹಳ ಬೇಗನೆ ನಮಗೆಲ್ಲಾ ದೊರೆಯಬೇಕಾಗಿದೆ. ಎಲ್ಲಾ ರೀತಿಗಳಿಂದ ಎಲ್ಲಾ ಸಮರ್ಥನೆಗಳು ಈ ಆಯಾಮದ ಸಮಗ್ರ ಚಿಂತನೆಗೆ ದೊರಕುವುದೆಂಬ ನಿಶ್ಚಿತ ಭರವಸೆಯಿಂದ ನೆಮ್ಮದಿಗಳನ್ನು ''ಸಮಾಧಾನಗಳನ್ನು'' ಪಡೆಯಬೇಕಾಗಿದೆ. ಅಧ್ಯಾತ್ಮ ಆಯಾಮದ ಚಿಂತನೆಗಳಿಗೆ ಒಂದು ವಚನವನ್ನು ಉದಾಹರಿಸಿ, ಈ ಲೇಖನವನ್ನು ಪ್ರತಿಪಾದಿಸಲಾಗಿದೆ.

ಬಸವಣ್ಣನವರು : ವಚನ : ೪೭೯. ಪುಟ ೧೧೫ ಭಕ್ತನ ಪ್ರಾಣಲಿಂಗಿಸ್ಥಲ – ?

*ಅಷ್ಟದಳ ಕಮಲವ ಸುತ್ತುವ ಜೀವಾತ್ಮನ*
*ಮೆಟ್ಟದ ದಳವನರಿಯದೆ*
*ಆನು ಭಕ್ತನೆಂತೆಂಬೆ? ಆನು ಶರಣನೆಂತೆಂಬೆ?*
*ಆನು ಲಿಂಗೈಕ್ಯನೆಂತೆಂಬೆ? ಕೂಡಲಸಂಗಮದೇವಾ*
*ಎನ್ನ ಮನವು ಸಮಾಧಾನವಾಗದನ್ನಕ್ಕ?*

ಇಂತಹ ವಚನ ವಿವೇಚನಗಳು ಪರಸ್ಪರ ಪ್ರತ್ಯಕ್ಷ ಅನುಭವ ಮಂಟಪಗಳ ಚರ್ಚೆಗಳಲ್ಲೇ ಪ್ರತಿಪಾದಿತವಾಗಿ ಚರ್ಚೆಗೆ ಒಳಗಾಗಬೇಕಾಗಿದೆ.

★

## STATEMENT OF OWNERSHIP PARTICULARS ABOUT "SIDDAGANGA"

### Form IV (See Rule 5)

| | | |
|---|---|---|
| Place of Publication | : | **Siddaganga (Regd.)**<br>Siddaganga Mutt,<br>Tumkur District – 572 104 |
| Periodicity of its Publication | : | **Monthly** |
| Printer's Name | : | **Sri G. Nagasundar** |
| Whether Citizen of India | : | **Indian** |
| Address | : | **M/s. Geethanjali Graphics**<br>No. 5, M.S.R. Indl., Estate,<br>Gokul Extension,<br>Bangalore – 560 054. |
| Publisher's Name | : | **Sri H. B. Gangadharaiah** |
| Whether Citizen of India | : | **Indian** |
| Address | : | **Publisher**<br>Old Students Association,<br>siddaganga Mutt,<br>Tumkur District – 572 104 |
| Editor's Name | : | **H.V. Veerabhadraiah** |
| Nationality | : | Indian |
| Address | : | **Editor,** "Siddaganga"<br>Siddaganga Mutt,<br>Tumkur District – 572 104 |

I, H.B. Gangadharaiah hereby declare that the particulars given above are true to the best of my knowledge and belief.

Bangalore
Date : 1-3-2005

**(H.B. Gangadharaiah)**
Signature of Publisher





## ಲಿಂಗೈಕ್ಯ ಪಂಡಿತ ಚನ್ನಪ್ಪ ಎರೇಸೀಮೆ

– ಜಯವಿಭವ ಸ್ವಾಮಿ
ಸಬ್ ಇನ್ಸ್‌ಪೆಕ್ಟರ್ ಆಫ್ ಪೊಲೀಸ್,
ಪೊಲೀಸ್ ತರಬೇತಿ ಮಹಾವಿದ್ಯಾಲಯ,
ನಾಗನಹಳ್ಳಿ, ಗುಲಬರ್ಗಾ – 585 105.
ದೂರವಾಣಿ : 94480 24010

ಅಪ್ಪಾಜಿಯವರು ಸಾಂಸಾರಿಕ ವಿಷಯಗಳಲ್ಲಿ ಅತೀವ ಆಸಕ್ತಿ ಮತ್ತು ಜವಾಬ್ದಾರಿ ಹೊರುತ್ತಿದ್ದರು. ಅವರು ಹೇಳಿದಂತೆಯೆ ನಡೆಯಬೇಕು. ಧೈರ್ಯ ಬಹಳ. ಬೆಳಿಗ್ಗೆ ೫ರ ನಂತರ ಎಂದು ಮಲಗಲೂ ನಮ್ಮನ್ನು ಬಿಟ್ಟಿಲ್ಲ. ಅವರದ್ದು ಕರಾರುವಾಕ್ಕಾದ ''ಆದರ್ಶ ಜೀವನ ಶೈಲಿ''. ಬೆಳಿಗ್ಗೆ ೪ಕ್ಕೆ ಎದ್ದು, ಸ್ನಾನ ಮಾಡಿ, ನಮಗೂ ಮಾಡಿಸಿ, ಹಾಲು ಕುಡಿಸಿ, ಓದಲು ಅವರ ರೂಮಿನಲ್ಲೇ ಕೂರಿಸುತ್ತಿದ್ದರು. ಅವರು ಬರವಣಿಗೆಯಲ್ಲಿ ಮಗ್ನರಾದರೆ ನಾವು ಓದಿನಲ್ಲಿ ಮಗ್ನರಾಗಲೇಬೇಕಿತ್ತು.



ನಮ್ಮದು ದೊಡ್ಡ ಮನೆತನ. ೧೯೮೩ ರವರೆವಿಗೆ, ಅಪ್ಪಾಜಿಯವರು ಸುಮಾರು ೬೪ ವರ್ಷಗಳಾಗುವರೆಗೆ ಹಗಲು ರಾತ್ರಿಯೆನ್ನದೇ ದುಡಿದು (ನಮ್ಮೂರಾದ ಹರವಿ, ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆಯಲ್ಲಿ) ಎರೇಸೀಮೆ ಮೇಲೆತ್ತಲು ಶ್ರಮಿಸಿದರು. ಹೊಲ-ಮನೆಗಳನ್ನು ಮಾಡಿ, ಮನೆತನವನ್ನು, ತಮ್ಮ-ತಂಗಿಯರು (ಅವರ ಮಕ್ಕಳ ಮದುವೆ ಇತ್ಯಾದಿ) ಮತ್ತು ಆಪ್ತರ ಬಡತನವನ್ನೂ ಹೋಗಲಾಡಿಸಿ ಹೃದಯ ಶ್ರೀಮಂತಿಕೆಯನ್ನು ತೋರಿದುದನ್ನು ಊರಿನ ಜನತೆ ಇಂದಿಗೂ ಸ್ಮರಿಸುತ್ತಿದೆ. ನಾವು ೭ ಜನ ಮಕ್ಕಳು. ೩ ಗಂಡು, ೪ ಹೆಣ್ಣು. ಈ ಮಧ್ಯೆ ಅಪ್ಪಾಜಿಯವರು ಉಪಾಧ್ಯಾಯ ವೃತ್ತಿಯಿಂದ ೧೯೭೫ರಲ್ಲಿ ನಿವೃತ್ತಿ ಹೊಂದಿದ ನಂತರ, ಸಂಸಾರ ನಿರ್ವಹಣೆ ಅವರಿಗೆ ಕಷ್ಟವಾಯಿತು. ಹಾಗಾಗಿ ನಾವೆಲ್ಲ ಸರ್ಕಾರಿ ಶಾಲೆಗಳಿಗೆ ಶರಣಾಗಿ (೩ ಗಂಡು ಮಕ್ಕಳು) ೧೦ನೇ ತರಗತಿ ಪಾಸಾದ ನಂತರ ಶಾಲೆಗೆ ಶರಣು ಹೇಳಿ, ಕೈಗೆ ಬಂದ ಉದ್ಯೋಗವನ್ನು ಶ್ರದ್ಧೆಯಿಂದ ಮಾಡುತ್ತಾ, ಅಪ್ಪಾಜಿಯವರಿಗೆ ಸಂಸಾರ ನಿರ್ವಹಣೆಯಲ್ಲಿ ಆಸರೆ ನೀಡುತ್ತಾ, ನಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸುವುದನ್ನು ಮಾತ್ರ ಮರೆಯಲಿಲ್ಲ. ಶ್ರದ್ಧೆಯ ಫಲವಾಗಿ ನಮ್ಮ ಹಿರಿಯ ಸಹೋದರ ವೈ.ಸಿ. ಶಿವಕುಮಾರ್ ೧೯೮೬-೮೭ರ ಕೆ.ಎ.ಎಸ್. ಪರೀಕ್ಷೆಯಲ್ಲಿ ಕನ್ನಡ ಮಾಧ್ಯಮದಲ್ಲಿ ಬರೆದು ಪಾಸಾದವರಲ್ಲಿ ಪ್ರಥಮ ಸ್ಥಾನ ದೊರೆತು ಸಹಾಯಕ ವಾಣಿಜ್ಯ ತೆರಿಗೆ ಆಯುಕ್ತರಾಗಿ (ಆಗ ವಾಣಿಜ್ಯ ತೆರಿಗೆ ಅಧಿಕಾರಿಯೆಂದು ಈ ಹುದ್ದೆಗೆ ಕರೆಯುತ್ತಿದ್ದರು) ನೇಮಕಗೊಂಡರು. ಅವರಿಗೆ ಕರ್ನಾಟಕ ಸರ್ಕಾರ ಕೆ.ಎ.ಎಸ್. ಪರೀಕ್ಷೆ ಕನ್ನಡ ಮಾಧ್ಯಮದಲ್ಲಿ ಬರೆದು ಅದರಲ್ಲಿ ಪ್ರಥಮ ಸ್ಥಾನಗಳಿಸಿದ್ದಕ್ಕೆ ನಗದು ಬಹುಮಾನ ಮತ್ತು ಪ್ರಶಂಸೆ ಪತ್ರ ನೀಡಿತು. ನಮ್ಮ ಮತ್ತೊಬ್ಬ ಸಹೋದರ ವೈ.ಸಿ. ಕಲ್ಲಿನಾಥ, ಕೈಗಾರಿಕೋದ್ಯಮಿಗಳಾಗಿ ಹೊರಹೊಮ್ಮಿದರು. ಎಂದಿಗೂ, ಅಪ್ಪಾಜಿಯವರ ಕೊನೆಯುಸಿರುವವರೆಗೂ, ನಾವುಗಳು ಅವರನ್ನು ಬಡತನವೆಂಬ ನೆನಪು ಸ್ವಲ್ಪವೂ ತಟ್ಟದಂತೆ ಹೂವಿನಂತೆ ನೋಡಿಕೊಂಡೆವು.

ಅಪ್ಪಾಜಿಯವರು ಊಟಕ್ಕೆ ಕೂರಲು ಕೈಕಾಲು ಮುಖ ತೊಳೆದರೆಂದರೆ, ನಾವೆಲ್ಲಾ (ಬಾಲ್ಯದಲ್ಲಿ) ಇಲಿಮರಿಗಳಂತೆ ತಕ್ಷಣ ಕೈಕಾಲು ಮುಖ ತೊಳೆದು ಅವರ ಜೊತೆಗೇ ಊಟಕ್ಕೆ ಕೂರಬೇಕಿತ್ತು. ಯಾರಾದರೂ ಕಾರಣವಿಲ್ಲದೆ ಗೈರುಹಾಜರಾದರೆ ಸಿಡಿಮಿಡಿಗೊಳ್ಳುತ್ತಿದ್ದರು. ಅವರು ಪೌಷ್ಠಿಕಾಂಶವುಳ್ಳ ಅಡುಗೆ ಬಗ್ಗೆ ಹೆಚ್ಚಿನ ನಿಗಾ ವಹಿಸುತ್ತಿದ್ದರು. ಅತಿಥಿ ಸತ್ಕಾರವೆಂದರೆ ಅವರಿಗೆ ಎಲ್ಲಿಲ್ಲದ ಪ್ರೀತಿ !

ಅಪ್ಪಾಜಿಯವರು ತಮ್ಮ ನಿಸ್ವಾರ್ಥ ಸೇವೆಯನ್ನು ಶ್ರೀಮಠಕ್ಕೆ ಸುಮಾರು ೬ ದಶಕಗಳ ಕಾಲ ನೀಡಿದರು. ಹಿರಿಯ ಶ್ರೀಗಳವರು ೧೯೩೮ (ಮೊಟ್ಟ ಮೊದಲ ಪತ್ರ) ತಮ್ಮ ಕೈಯಾರೆ ಪತ್ರ ಬರೆದು, ಓದಲು ಅಡಚಣೆಗಳಿದ್ದರೆ ಶ್ರೀಮಠಕ್ಕೆ ಬರಲು ತಿಳಿಸಿದ್ದರು. ಆ ಪತ್ರವನ್ನು ನನಗೆ ನೀಡಿ 'ಜೋಪಾನವಾಗಿಟ್ಟಿರು' ಎಂದು ಹೇಳಿದ್ದರು. ಅದನ್ನು ಈಗಲೂ ಇಟ್ಟಿದ್ದು ಆಗಾಗ್ಗೆ ತೆಗೆದು ಓದುತ್ತಿರುತ್ತೇನೆ. ಅಂದಿನಿಂದ ಪ್ರಾರಂಭವಾದ ಶ್ರೀಮಠದ ಮತ್ತು ಶ್ರೀಗಳವರ

ಸಂಬಂಧ ಅನ್ಯೋನ್ಯತೆಗೆ ಮುಂದುವರೆದು, ನೂರಾರು ಲೇಖನ-ಪುಸ್ತಕಗಳನ್ನು ಬರೆದರು, ಸಂಪಾದಿಸಿದರು. ಇವೆಲ್ಲವೂ ಶ್ರೀಗಳವರ ಅನುಗ್ರಹದಿಂದಲೇ ನಡೆದುವುಗಳಾಗಿದ್ದವು. ಸಿದ್ಧಗಂಗಾ ಮಾಸ ಪತ್ರಿಕೆಯ ಪ್ರಧಾನ ಸಂಪಾದಕರಾಗಿ ಪತ್ರಿಕೆಯನ್ನು ಬೆಳೆಸಿದರು. ಅಪ್ಪಾಜಿಯವರು ಹಿರಿಯ ಶ್ರೀಗಳವರಲ್ಲಿ ಅಪಾರವಾದ ನಿಷ್ಠೆ, ಭಯ, ಭಕ್ತಿ ಹೊಂದಿದ್ದರು. ಅವರನ್ನು ಆಸ್ಥಾನ ಪಂಡಿತರೆಂದೇ ಜನ ಭಾವಿಸಿದ್ದರು. ಅವರು ಶ್ರೀಗಳವರನ್ನು ಎಂತಹ ಸಂದರ್ಭದಲ್ಲೂ ಹೊಟ್ಟೆಹುಣ್ಣಾಗುವಂತಹ ನಗು ಬರಿಸಿಬಿಡುತ್ತಿದ್ದರು. ಬಸವಣ್ಣನವರ ತತ್ತ್ವಗಳ ನಿಜ ಅರ್ಥವನ್ನು ತಿಳಿದಿದ್ದರು.

ನನ್ನ ಒತ್ತಾಯಕ್ಕೆ ನಾನು ಅಪ್ಪಾಜಿಯ ಗಮನಕ್ಕೆ ತರದೇ ನನ್ನ ಸಹೋದರ ಹಾಗೂ ಮಾವನವರೊಡಗೂಡಿ ನನ್ನ ಶ್ರೀಮತಿಗೆ ಮಠದ ವಿದ್ಯಾಸಂಸ್ಥೆಗಳಲ್ಲಿ ಶಿಕ್ಷಕಿಯ ಹುದ್ದೆಯೊಂದನ್ನು ಕೋರಿ ಶ್ರೀಗಳ ಬಳಿ ಹೋಗಿದ್ದುಂಟು. ಅದಾದ ೧-೨ ವರ್ಷಗಳ ನಂತರ ನನ್ನ ಶ್ರೀಮತಿ (ಶ್ರೀಗಳವರ ಕೃಪಾಕಟಾಕ್ಷವೇ) ಶಿಕ್ಷಣಾಧಿಕಾರಿಯಾಗಿ (ಕೆ.ಇ.ಎಸ್.) ಆಯ್ಕೆಯಾದಾಗ ನಿಟ್ಟುಸಿರುಬಿಟ್ಟರು. ಸೊಸೆಯನ್ನು ನನ್ನ ಮದುವೆಯ ನಂತರವೂ ಸ್ನಾತಕೋತ್ತರ ಪದವಿ ಪಡೆಯುವಂತೆ ಹುರಿದುಂಬಿಸಿದರು. ನಂತರ ಆಕೆಗೆ ಒಳ್ಳೆಯ ಹುದ್ದೆಯೇ ದೊರೆತಾಗ ನಿಟ್ಟುಸಿರುಬಿಟ್ಟರು. ನನಗೆ ತಿಳಿದಂತೆ ಅವರು ಕೊನೆಯ ಘಳಿಗೆಯವರೆವಿಗೂ ಶ್ರೀಗಳವರ ಜೊತೆಗಿದ್ದ ಸಲಿಗೆ, ಅಪಾರ ಮಮತೆಯನ್ನು ಎಂದಿಗೂ ಸ್ವಾರ್ಥಕ್ಕಾಗಿ ಉಪಯೋಗಿಸಲಿಲ್ಲ.

ಅಪ್ಪಾಜಿಯವರಲ್ಲಿ ವಜ್ರದಂತೆ ಹೊಳೆಯುವ ಪಾಂಡಿತ್ಯಕ್ಕೆ ಉಕ್ಕಿನಂತಹ ಕಠಿಣ ಹಾಗೂ ದೃಢ ಮನಸ್ಸು, ಮಲ್ಲಿಗೆಯಂತಹ ಮೃದು ಹಾಗೂ ಸುವಾಸನೆ ಬೀರುವ ಪ್ರೀತಿ ವಾತ್ಸಲ್ಯವನ್ನು ಹತ್ತಿರದಿಂದ ನೋಡಿದವರು ಮಾತ್ರ ಅರಿತಿದ್ದರು. ಇಲ್ಲಿ ಒಂದು ಘಟನೆ ನೆನಪಿಗೆ ಬರುತ್ತದೆ. ಆಗ ನಾನು ೮ನೇ ತರಗತಿಯಲ್ಲಿದ್ದೆ. ಶಾಲೆಯಲ್ಲಿ ನಂದಿಬೆಟ್ಟಕ್ಕೆ ಪ್ರವಾಸ ಇಟ್ಟುಕೊಂಡಿದ್ದರು. ಎಲ್ಲ ಪ್ರಸ್ತಾವನೆಗಳೂ ಮಾತೃಶ್ರೀಯವರ ಮೂಲಕ ಹೋದರೆ ಅವರು ಸಮಯ ಸಂದರ್ಭ ನೋಡಿ ಅನುಮೋದನೆ ಗಿಟ್ಟಿಸುತ್ತಿದ್ದರು. ಆ ಬಾರಿ ಅಪ್ಪಾಜಿ ಎಲ್ಲೋ ಹೊರಗೆ ಹೋದವರು ಮನೆಗೆ ವಾಪಸ್ ಬಂದರು. ನಾನು ತಕ್ಷಣ ಸೀದಾ ಅಪ್ಪಾಜಿಯವರನ್ನೇ ''ಸ್ಕೂಲಿನಲ್ಲಿ ನಂದಿಬೆಟ್ಟಕ್ಕೆ ಟೂರ್‌ಗೆ ಹೋಗುತ್ತಾರಂತೆ, ನನಗೆ ಕಳಿಸಿಕೊಡುವಿರಾ?'' ಎಂದು ಕೇಳಿಬಿಟ್ಟೆ! ಆಗ ನನ್ನ ತಲೆಗೂದಲು ಹೆಚ್ಚಿದ್ದವು. ಅವರಿಗೆ ಯಾವ ಸಿಟ್ಟಿತ್ತೋ! ಗೊತ್ತಿಲ್ಲ. ನನ್ನ ನೆತ್ತಿಯ ಮೇಲಿನ ಕೂದಲನ್ನು ಅವರ ಬಲಗೈಯಲ್ಲಿ ಹಿಡಿದು ಸಂಪೂರ್ಣ ಮೇಲಕ್ಕೆತ್ತಿ ''ನೋಡಲ್ಲಿ ನಂದಿಬೆಟ್ಟ ಕಾಣುತ್ತಿದೆಯಾ?!'' ಎಂದರು. ನನಗೋ ಸಹಿಸಲಾರದ ನೋವು ''ಹಾಂ! ಕಾಣ್ತಾ ಐತೆ! ಬಿಡಿ ಬಿಡಿ ಅಯ್ಯಯ್ಯೋ!'' ಎಂದೆ ಬಿಟ್ಟರು. ತಕ್ಷಣ ಸ್ನಾನದ ಕೋಣೆಗೆ ಹೋಗಿ ಸ್ನಾನಮಾಡಿ, ಪೂಜೆಮಾಡಿ, ರಾತ್ರಿ ಊಟ ಮಾಡಿ, ಎಲೆ-ಅಡಿಕೆ ಜಗಿಯುತ್ತಾ ನನ್ನನ್ನು ಪ್ರವಾಸದ ಬಗ್ಗೆ ಮಾತಾಡಲು ಕರೆದರು. ನಾನು ಅಲ್ಲಿಂದ ಓಟಕಿತ್ತೆ. ಅಪ್ಪಾಜಿ ಅಟ್ಟಿಸಿಕೊಂಡು ಹಿಡಿದರು, ಮುದ್ದಾಡಿದರು. ಸಾಂತ್ವನಗೈದರು. ಅವರಿಗೆ ಅವರ ತಪ್ಪಿನ ಅರಿವಾಗಿತ್ತು. ಪ್ರವಾಸಕ್ಕೆ ಹೋಗಿಬಾ ಎಂದು ಹಣ ನೀಡಲು ಬಂದರು. ನಾನು ಸುತರಾಂ ಒಪ್ಪಲೇ ಇಲ್ಲ. ಕೊನೆಗೆ ನನ್ನ ಗಮನಕ್ಕೆ ಬರದಂತೆ ನಮ್ಮ ಶಾಲೆಗೆ ಬಂದು ಉಪಾಧ್ಯಾಯರಿಗೆ ಹಣವನ್ನು ಕೊಟ್ಟು ಹೋದರು. ನಮ್ಮ ಜೀವಮಾನವಿಡೀ ಹಿಂದೆ ನೋಡಿದಾಗ, ಅದೊಂದೇ ಸಲ ಅವರು ನಮ್ಮ ಶಾಲೆಗೆ ಬಂದಿದ್ದು. ಪ್ರವಾಸಕ್ಕೆ ಹೋಗುವವರೆಗೆ ಬಿಡಲಿಲ್ಲ. ಹೋಗಿಬಂದೆ. ನಂತರ ಯಾವ ಶಾಲಾ ಪ್ರವಾಸವನ್ನೂ ತಪ್ಪದೇ ಕಳಿಸುತ್ತಿದ್ದರು. ಇವೆಲ್ಲ ಏಕೆ ಹೇಳಿದೆನೆಂದರೆ, ಹಿರಿಯರು ದಣಿವಾಗಿ ಹೊರಗಿನಿಂದ ಮನೆಗೆ ಬಂದಾಗ ಮೊದಲು ಉಪಚರಿಸಬೇಕು. ನಂತರ ಮಿಕ್ಕದ್ದೆಲ್ಲ. ನಮ್ಮ ಮಾತೃಶ್ರೀ ಅಪ್ಪಾಜಿಯವರನ್ನು ಈ ವಿಷಯದಲ್ಲಿ ಚೆನ್ನಾಗಿ ಅರಿತಿದ್ದರು. ಮಾತೃಶ್ರೀಯವರ ಮೂಲಕ ಹೋಗದೇ, ಪರಿಸ್ಥಿತಿ ಅರ್ಥೈಸಿಕೊಳ್ಳದೇ ಕೇಳಿದ್ದರಿಂದ, ಅವರ ಉಕ್ಕಿನಂತಹ ಮನಸ್ಸನ್ನು ನಾನು ಬಿಸಿಗೊಳಿಸಿದ್ದೆ ಎಂಬುದು ಈಗ ಅರ್ಥವಾಗುತ್ತದೆ. ಆದರೆ ಆ ನೋವನ್ನು ತಕ್ಷಣ ಕೆಲಕ್ಷಣಗಳಲ್ಲಿ ಅರಿತು ಸಮಾಧಾನಿಸಿಬಿಡುತ್ತಿದ್ದರು. ಅಷ್ಟೇ ಮೃದು ಸ್ವಭಾವ ಎಂಬುದಕ್ಕೆ ಇದೊಂದು ನಿದರ್ಶನ.

ಜೀವಮಾನವಿಡೀ ಅಪ್ಪಾಜಿಯವರು ಸರಳತೆಗೆ ಹೆಸರಾದವರು. ಅಂದರೆ ಅವರ ವಿಶಿಷ್ಟಶೈಲಿಯ ಬಿಳಿಷರ್ಟು ಮತ್ತು ಪ್ರೋಣಿಸಿ ಉಡುತ್ತಿದ್ದ ಕಚ್ಚೆಪಂಚೆ. ಇವೆರಡನ್ನೂ ಬಿಟ್ಟು ಬೇರೇನೂ ಧರಿಸಲಿಲ್ಲ. ಪ್ರತಿದಿನ ಇಸ್ತ್ರಿ ಮಾಡಿದ ಮಡಿ ಬಟ್ಟೆಯೇ ಬೇಕು. ಅವರ ನಡಿಗೆ ಬಹಳ ಬಿರುಸು. ನಾವು ಜೊತೆಗೆ ಹೋದರೆ, ಏಕಾದರೂ ಜೊತೆಗಿದ್ದೇವೆಯೋ ಎನಿಸುತ್ತಿತ್ತು. ಆದರೆ ದೊಡ್ಡವರಾದ ನಂತರ ಎಲ್ಲವೂ ಅರಿವಾಗಿತ್ತು.

ಗಣೇಶ ಬೀಡಿ, ಎಲೆ-ಅಡಿಕೆ, ಜರ್ದಾ, ಪಾನ್ ಅವರ ಆಪ್ತಮಿತ್ರರಾಗಿದ್ದವು. ಯಾವುದಾದರೂ ಸಮಾರಂಭದಲ್ಲಿ ಭಾಷಣಕ್ಕೆ ಹೋಗುವಾಗ ಜರ್ದಾ ಎಲೆ-ಅಡಿಕೆ ಪಕ್ಕಾ ಹಾಕಿದರೇ ಅವರ ಧ್ವನಿಗೆ ಇಂಪು ಮತ್ತು ಧ್ವನಿವರ್ಧಕವೂ ಅಗತ್ಯವಿರುತ್ತಿರಲಿಲ್ಲ. ಬಹಳಷ್ಟು ಜನ (ಶ್ರೀಗಳವರೂ ಕೂಡ) ಧ್ವನಿ ತಗ್ಗಿಸಲು ಹೇಳಿದ್ದುಂಟು. ಆದರೆ, ಅದೊಂದು ಮಾತ್ರ ಅವರಿಗೆ ಆಗುತ್ತಿರಲಿಲ್ಲ. ತದನಂತರ, ಕ್ರಮೇಣ ೧೯೯೪-೯೫ರ ವೇಳೆಗೆ ಎಲ್ಲವನ್ನೂ ಬಿಟ್ಟುಬಿಟ್ಟರು. ಅಪ್ಪಾಜಿಯವರಿಗೆ ಯಾವರೀತಿಯ ಕಾಯಿಲೆಗಳು ಇರಲಿಲ್ಲ. ಬಿ.ಪಿ. ಶುಗರ್ ಅನತಿ ದೂರದಲ್ಲಿದ್ದವು. ೭೮ನೇ ವರ್ಷದ







ಕುಟುಂಬದ ಸದಸ್ಯರೊಡನೆ ಲಿಂ. ಪಂಡಿತ ಚನ್ನಪ್ಪ ಎರೇಸೀಮೆ.

ನಂತರ ಅಪ್ಪಾಜಿಯವರ ಚಟುವಟಿಕೆಗಳು ಕ್ರಮೇಣ ಕಡಿಮೆಯಾಗುತ್ತಾ ಬಂದವು. ಸಾರ್ವಜನಿಕ ಸಭೆ ಸಮಾರಂಭಗಳನ್ನು ಬಿಟ್ಟರು. ಆದರೂ ಆಸೆ ಇತ್ತು, ಹಾಗಾಗಿ ನಾನು ಅಪ್ಪಾಜಿಯವರನ್ನು ಅವರು ತೀವ್ರ ಅಸ್ವಸ್ಥರಾಗುವವರೆಗೆ ಎಲ್ಲಾ ಕಡೆ ಖುದ್ದಾಗಿ ಕರೆದುಕೊಂಡು ಹೋಗಿ, ಇನ್ನೂ ಸದೃಢರಾಗಿದ್ದಾರೆಂಬ ಆತ್ಮವಿಶ್ವಾಸವಿರುವಂತೆ ಪ್ರಯತ್ನಿಸಿದೆ. ಅವರು ಶ್ರೀಮಠಕ್ಕಾಗಿ ಬರೆದ ಕೊನೆಯ ಗ್ರಂಥ 'ಉದ್ದಾನೇಶ ಚರಿತೆ'. ಈ ಕೃತಿಗೆ ಸುತ್ತೂರು ಮಠದ ''ಶ್ರೀ ಶಿವರಾತ್ರೀಶ್ವರ ಪ್ರಶಸ್ತಿ'' ಲಭಿಸಿತು. ಶ್ರೀಮಠವು ಅವರನ್ನು ಎತ್ತಿ ಬೆಳೆಸಿ, ಉತ್ತುಂಗಕ್ಕೇರಿಸಿತು. ಅವರ ೮೦ನೇ ವಯಸ್ಸಿನ ನಂತರ ಮಿದುಳಿನಲ್ಲಿ ಜ್ಞಾಪಕಶಕ್ತಿ ಹಿಡಿದಿಟ್ಟುಕೊಳ್ಳುವ ಜೀವಕಣಗಳ ನಶಿಸುವಿಕೆಯಿಂದ ಅನಾರೋಗ್ಯಕ್ಕೊಳಗಾದರು. ೧೫-೧೨-೨೦೦೩ರಂದು ಅನಾರೋಗ್ಯತೆ ತೀವ್ರವಾಗಿ ಆಸ್ಪತ್ರೆಗೆ ದಾಖಲಾದರು. ಸಿದ್ಧಗಂಗೆಯ ಹಿರಿಯ ಶ್ರೀಗಳವರು ಜನವರಿ ಎರಡನೇ ವಾರದಲ್ಲೊಂದು ದಿನ ಆಸ್ಪತ್ರೆಗೆ ಬಂದು ೧೫-೨೦ ನಿಮಿಷ ತದೇಕ ಚಿತ್ತದಿಂದ (ಮಾರ್ಥಾಸ್ ಆಸ್ಪತ್ರೆ, ಬೆಂಗಳೂರು) ಅಪ್ಪಾಜಿಯವರತ್ತ ದಿಟ್ಟಿಸುತ್ತ ಮಾತನಾಡುವರೇ ಎಂದು ನೋಡಿದರು. ಅಪ್ಪಾಜಿಯವರಿಗೆ ಅರೆಪ್ರಜ್ಞಾವಸ್ಥೆ ಶ್ರೀ ಶ್ರೀಗಳವರಲ್ಲಿ ಮಠದ ಆಪ್ತರೊಬ್ಬರನ್ನು ದೇವರು ಸೆಳೆದುಕೊಳ್ಳುತ್ತಿರುವನೆಂಬ ಭಾವನೆ ಖಂಡಿತ ಮೂಡಿರಬೇಕು (ಅದರಲ್ಲೂ ಶ್ರೀಗಳು ಅಪ್ಪಾಜಿಯವರನ್ನು ತುಂಬಾ ಹಚ್ಚಿಕೊಂಡಿದ್ದರು ಎಂದು ಶ್ರೀಗಳವರ ಆಪ್ತವರ್ಗ ನನಗೆ ಆಗಾಗ್ಗೆ ಹೇಳುತ್ತಿದ್ದುದುಂಟು). ಖಿನ್ನರಾಗಿದ್ದ ನಮ್ಮನ್ನೆಲ್ಲಾ ಮಾತನಾಡಿಸಿ ಧೈರ್ಯ ತುಂಬಿದರು. ನಂತರ ಮನೆಗೆ ತರಲಾಯಿತು (ಫೆಬ್ರವರಿ ೧೦, ೨೦೦೪). ಆದರೆ ಚೇತರಿಸಿಕೊಳ್ಳಲಿಲ್ಲ. ಕೊನೆಯ ದಿನಗಳಲ್ಲಿ ದೈಹಿಕವಾಗಿ ಅತೀವ ನೋವು ಅನುಭವಿಸಿದರು. ಕೊನೆಗೆ ದಿನಾಂಕ ೨೯-೨-೨೦೦೪ರಂದು ಕಣ್ಮುಂದೆಯೇ ನಮ್ಮ ಸ್ವಗೃಹದಲ್ಲೇ ಕೊನೆಯುಸಿರೆಳೆದರು.

ಅವರು ಹಾಕಿಕೊಟ್ಟ ಮಾರ್ಗ, ಕಲಿಸಿದ ನಡೆ-ನುಡಿ ಮತ್ತು ನಮ್ಮಿಂದ ಅವರು ಅಪೇಕ್ಷಿಸಿದ್ದನ್ನು ನಾವು ಇನ್ನು ಮುಂದೆ ಧೈರ್ಯದಿಂದ ಮಾಡುತ್ತೇವೆಂಬ ಸಂಕಲ್ಪ ಮಾಡುತ್ತಾ, ಅವರನ್ನು ಉತ್ತುಂಗಕ್ಕೇರಿಸಿದ ಶ್ರೀಮಠಕ್ಕೆ, ಶ್ರೀ ಶ್ರೀಗಳವರಿಗೆ, ಅಪಾರ ಜನಸ್ತೋಮಕ್ಕೆ ವಂದಿಸುತ್ತಾ ಅಪ್ಪಾಜಿಯವರ ವಾರ್ಷಿಕ ಪುಣ್ಯಸ್ಮರಣೆಯನ್ನು ಎರೇಸೀಮೆ ಬಳಗದವರು ದಿನಾಂಕ ೨೮-೨-೨೦೦೫ರಂದು ನೆರವೇರಿಸಿತು.

★



# ಶರಣರ ದೃಷ್ಟಿಯಲ್ಲಿ 'ಗುರು' : ಒಂದು ವಿವೇಚನೆ

ಭಾಗ – ೫

– ಎಚ್.ಎಸ್. ಸಿದ್ಧಗಂಗಪ್ಪ
'ಶಿವಕೃಪ', ನಂ. ೫೩/೧, ಮೂರನೇ ಅಡ್ಡರಸ್ತೆ,
ಕಾವೇರಿ ಬಡಾವಣೆ, ನಾಗರಭಾವಿ ರಸ್ತೆ
ವಿಜಯನಗರ, ಬೆಂಗಳೂರು – ೪೦.

ನಿರಾಕಾರ ಪರಬ್ರಹ್ಮವೇ ಸಾಕಾರವಾಗಿ ಪ್ರತ್ಯಕ್ಷ ಪರಬ್ರಹ್ಮವೆನಿಸಿದ ಗುರು ಮತ್ತೆ ಗುರುದೇವನಿಗಿಂತ ಅಧಿಕವಾದ ದೈವವೊಂದಿಲ್ಲ. ಗುರುವೇ ಪರತತ್ತ್ವ. ಗುರುವೇ ಪರವಸ್ತು, ಗುರುವೇ ಪರಶಿವ ಮಹಾಲಿಂಗ. ಹೀಗೆ ಗುರುಕಾರುಣ್ಯವನ್ನು ಪಡೆದು ಪರಮ ಪುನೀತರಾದ ಮಹಿಮರಿಂದ ಸದ್ಗುರುವಿನ ಘನಮಹಿಮೆಯನ್ನು ಕೇಳುತ್ತಾ ಹೋದರೆ ಅದೊಂದು ಮುಗಿಯದ ದಿವ್ಯ ಮಹಾಪುರಾಣ.[೨೧]

**ಗು**ರುವಿನ ಅನುಗ್ರಹ, ಕರುಣೆ ಇದ್ದರೆ ಶಿಷ್ಯನು ಪುಟಕ್ಕಿಟ್ಟ ಚಿನ್ನದಂತೆ ಪರಿಶುದ್ಧನಾಗುತ್ತಾನೆ ಎಂಬುದನ್ನು ಈ ಕೆಳಗಿನ ವಚನಗಳಲ್ಲಿ ಕಾಣಬಹುದು.

*ಗುರು ಕರುಣಿಸಿ ಬಿಟ್ಟಿತ್ತು ಮಾಯೆ*
*ಗುರು ಕರುಣಿಸಿ ಬಿಟ್ಟಿತ್ತು ಮರವೆ*
*ಗುರು ಕರುಣಿಸಿ ಬಿಟ್ಟಿತ್ತು ಪ್ರಪಂಚು*
*ಕೂಡಲಚೆನ್ನಸಂಗಮದೇವಾ ಗುರುಕರುಣಿಸಿ ಬಿಟ್ಟಿತ್ತ ತನ್ನ ಕರ್ಮಪಾಶ*[೨೨]

*ಬಿಸಿಲ ಮುಂದಣ ಮಂಜಿನಂತಾಯಿತ್ತು, ದಿಟದ ಮುಂದಣ*
*ಸಟೆಯಂತಾಯಿತ್ತು*
*ಪುಣ್ಯದ ಮುಂದಣ ಪಾಪದಂತಾಯಿತ್ತು, ಯೋಗಿಯ ಮುಂದಣ*
*ಸಂಸಾರದಂತಾಯಿತ್ತು*
*ಧೀರನ ಮುಂದಣ ಹೇಡಿಯಂತಾಯಿತ್ತು, ಉರಗನ ಮುಂದಣ*
*ಭೇಕನಂತಾಯಿತ್ತು*
*ಹರಿಯ ಮುಂದಣ ಕರಿಯಂತಾಯಿತ್ತು, ವಿವೇಕಿಯ ಮುಂದಣ*
*ದುಃಖದಂತಾಯಿತ್ತು*
*ಪುಣ್ಯರಣ್ಯದಹನ ಭೀಮೇಶ್ವರವೆಂಬ ಸದ್ಗುರು ಕಾರುಣ್ಯವಾಗಲೊಡನೆ*
*ಎನ್ನ ಸುತ್ತಿಹ ಪ್ರಪಂಚು ಸರ್ವವೂ ಓಡಿದುದುವಯ್ಯಾ*[೨೩]

ವೀರಶೈವ ಧರ್ಮದಲ್ಲಿ ದೀಕ್ಷಾ ಸಂಸ್ಕಾರ ಬಹು ಮುಖ್ಯವಾದುದು. ಈ ಸಂದರ್ಭದಲ್ಲಿ ಗುರುಗಳು ಶಿಷ್ಯನಿಗೆ ಉಪದೇಶ ಮಾಡುವರು. ಅವರ ಉಪದೇಶವನ್ನು ಚಾಚೂ ತಪ್ಪದೆ ಜೀವನದಲ್ಲಿ ಅಳವಡಿಸಿಕೊಂಡು ಅನುಷ್ಠಾನಗೊಳಿಸುತ್ತಾ ಬಂದರೆ ಶಿಷ್ಯನ ಜೀವನ ಸುಖಮಯವಾಗುತ್ತದೆ. ಸುಖ ಎಂದರೆ ಲೌಕಿಕ ಸುಖಕ್ಕಿಂತ ಆಧ್ಯಾತ್ಮಿಕ ಸುಖವನ್ನು ಹೊಂದುತ್ತಾನೆ. ಗುರುವು ನೀಡುವ ಉಪದೇಶ ಹೀಗಿದೆ.

''**ಗು**ರು ಲಿಂಗ ಜಂಗಮದ ಹೊರತು ಸ್ಥಾವರ ಲಿಂಗಾದಿಗಳಲ್ಲಿ ಶಿವಪ್ರಸಾದದ ಹೊರತು ಪ್ರಾಕೃತ ಅನ್ನಾದಿಗಳಲ್ಲಿ ನಿನಗೆ ಆಸಕ್ತಿಬಾರದು. ಸತ್ಯವನ್ನು ಹೇಳು. ಧರ್ಮವನ್ನು ಆಚರಿಸಿ ಪರಿಶುದ್ಧವಾದ ಯಾವುದಾದರೊಂದು ಕಾಯಕದಿಂದ ದ್ರವ್ಯವನ್ನು ಗಳಿಸಿ ದಾಸೋಹಂಭಾವದಿಂದ ವರ್ತಿಸು. ದೀಕ್ಷೆಯಿಂದ ಪವಿತ್ರವಾದ ವೀರಶೈವರಲ್ಲಿ ಜಾತಿ ವೃತ್ತಿ ಕುಲಾಚಾರಗಳ ಭೇದವನ್ನು ಎಂದಿಗೂ ಮಾಡಬಾರದು. ವೀರಶೈವ ಧರ್ಮದಲ್ಲಿ ನಿನಗೆ ಸಂದೇಶ ಬಂದರೆ ಪೂರ್ವಾಚಾರ್ಯರ ಶರಣರ ನಿರ್ಣಯವನ್ನು ಮಾನಿಸು. ವೀರಶೈವ ಧರ್ಮಕ್ಕೆ ಅಪಾಯವು ಸಂಭವಿಸಿದರೆ ನೀನು ಪ್ರಾಣವನ್ನಾದರೂ ಬಿಟ್ಟು ಅದಕ್ಕೆ ಪ್ರತೀಕಾರವನ್ನು ಮಾಡು. ಗುರು ಜಂಗಮದಲ್ಲಿ ಭೇದವೆಣಿಸಬೇಡ. ತಾಯಿ, ತಂದೆ, ಗುರು, ಜಂಗಮರನ್ನು ದೇವರೆಂದು ತಿಳಿ. ನೀನು ಆಚಾರ್ಯರು (ಗುರುಗಳು) ಬೋಧಿಸಿದ ಶರಣರು ಆಚರಿಸಿದ ಮಾರ್ಗದಲ್ಲಿ ಸಾಗು. ಪ್ರಾತಃ

೨೧. ಅದೇ ಪುಟ-೧೫೫.
೨೨. ಲಿಂಗಲೀಲಾ ವಿಲಾಸ ಚಾರಿತ್ರ, ಕಲ್ಲುಮಠದ ಪ್ರಭುದೇವರು. ಸಂ. ಸಂ.ಶಿ. ಭೂಸನೂರಮಠ, ಶ್ರೀ ಮ.ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು, ಮುರುಘಾಮಠ, ಧಾರವಾಡ ೧೯೫೬, ಪುಟ ೧೪೧
೨೩. ಅದೇ ಪುಟ-೧೪೦.





ಸಾಯಂಕಾಲಗಳಲ್ಲಿ ನಿಯಮದಿಂದ ಸ್ನಾನ ಮಾಡಿ, ಭಸ್ಮ, ರುದ್ರಾಕ್ಷಿಗಳನ್ನು ಧರಿಸಿ ಶಿವಪಂಚಾಕ್ಷರಿಯನ್ನು ಜಪಿಸುತ್ತಾ ವಾಮಹಸ್ತ ಪೀಠದಲ್ಲಿ ನಿನ್ನ ಇಷ್ಟಲಿಂಗವನ್ನು ಪೂಜಿಸು. ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿ, ಷಟ್‌ಸ್ಥಲವೇ ಆತ್ಮವಾಗಿ ಶಿವಯೋಗಮಾರ್ಗದಲ್ಲಿ ಸಾಗು. ಜ್ಞಾನವನ್ನು ಕ್ರಿಯೆಯಲ್ಲಿ ಪೂರ್ಣಗೊಳಿಸಿ, ಲಿಂಗಾಂಗ ಸಾಮರಸ್ಯವೆಂಬ ಪರಮಾನಂದವನ್ನು ಹೊಂದು''[೨೪] ಎಂದು ಉಪದೇಶಿಸುತ್ತಾರೆ. ಗುರು ನಿಡಿದ ಈ ಉಪದೇಶ ಶಿಷ್ಯನ ಬಾಳಿಗೆ ಬೆಳಕಾಗುತ್ತದೆ. ಆ ಬೆಳಕಿನಲ್ಲಿ ಮುನ್ನಡೆದು ಜೀವನವನ್ನು ಸಾರ್ಥಕಗೊಳಿಸಿಕೊಳ್ಳುತ್ತಾನೆ.

''**ಯಾ**ವುದೇ ವಿಚಾರವನ್ನು ಜನಸಾಮಾನ್ಯರಿಗೆ ಮುಟ್ಟಿಸಬೇಕಾದರೆ ಒಂದು ವ್ಯವಸ್ಥೆ ಇರಲೇಬೇಕಾಗುತ್ತದೆ. ಈ ವ್ಯವಸ್ಥೆಯನ್ನು ಗುರುವೆಂದು ಕಂಡುಕೊಂಡಿದ್ದಾರೆ. ಈ ಗುರುವಿನ ಮಹತ್ವವನ್ನು ವೀರಶೈವ ಧರ್ಮವು ಎತ್ತಿ ಹಿಡಿಯುತ್ತದೆ. ಗುರು ಮುಖೇನ ಏನಾದರೂ ಹೇಳಲು ಮತ್ತು ಮುಟ್ಟಿಸಲು ಸಾಧ್ಯವೆಂಬುದನ್ನು ಅರಿತುಕೊಂಡ ಬಸವಾದಿ ಶರಣರು ಗುರುವಿನ ಸ್ಥಾನವನ್ನು ಹಿರಿದಾಗಿಯೇ ಕಲ್ಪಿಸಿದರು. ಗುರುವಿನ ಮೂಲಕವೇ ತಮ್ಮ ವಿಚಾರಧಾರೆಯನ್ನು ಸಮಾಜದಲ್ಲಿ ಅನುಷ್ಠಾನಕ್ಕೆ ತರುವಾಗಲೆಲ್ಲ ವೈದಿಕ ಗುರುವಿನ ಮಡಿವಂತಿಕೆ ಆಚಾರ ವಿಚಾರವನ್ನೆಲ್ಲಾ ಬಿಡಿಸಿಕೊಂಡು ಸಾಮಾನ್ಯರಿಗೂ ನಿಲುಕುವ ಹಾಗೇ ಗುರುವಿನ ಹುಟ್ಟನ್ನು ಕಟ್ಟಿಕೊಟ್ಟಿದ್ದರು. ಗುರುಮುಖೇನ ವಿಚಾರ ಹೇಳಿಸುವ, ಒಪ್ಪಿಸುವ ಬಸವಣ್ಣನವರು ಗುರುವಿನ ವ್ಯಕ್ತಿತ್ವದ ಬಗ್ಗೆಯೂ ಸಾಮಾಜಿಕವಾಗಿಯೇ ಮಾತನಾಡಿದ್ದಾರೆ. ಗುರು ಎಂಬುವವ ಇಲ್ಲಿಯವರೆಗೂ ವಂಶಪಾರಂಪರ್ಯವಾಗಿ ಅಥವಾ ವರ್ಣವ್ಯವಸ್ಥೆಯ ಶ್ರೇಷ್ಠ ನೆಲೆಯಿಂದ ಮೂಡಿದ, ಹುಟ್ಟಿದ ವ್ಯಕ್ತಿಯಾಗಿದ್ದರೆ ಶರಣರ ಕಾಲದಲ್ಲಿ ವ್ಯಕ್ತಿತ್ವದ ಗುಣದ ಶ್ರೇಷ್ಠತೆಯಿಂದ ಗುರುಸ್ಥಾನವನ್ನು ಯಾರಾದರೂ ಹೊಂದಬಲ್ಲರು ಎಂಬುದನ್ನು ಆಚರಿಸಿ ತೋರಿಸಿದರು.[೨೫]

**ಗು**ರು ಎಂಬ ಶಬ್ದಕ್ಕೆ ನಮ್ಮ ಸಂಸ್ಕೃತಿಯಲ್ಲಿ ಪರಮೋಚ್ಚ ಗೌರವ ಅರ್ಥವಿದೆ. ಮಂಗಳದ ಪ್ರತಿಷ್ಠಾನವಿದೆ. ಪ್ರತ್ಯಕ್ಷ ಇಳೆಯ ದೇವರೆಂಬ ಭಕ್ತಿ ನಿಷ್ಠೆ ಇದೆ. ಎಲ್ಲ ಚಿಂತನೆಗಳ, ಸಿದ್ಧಾಂತಗಳ ಹಾರೈಕೆಯಲ್ಲೂ ಗುರು ಅದ್ವಿತೀಯ ಎನಿಸಿದ್ದಾನೆ. ಅಂತೇ 'ನ ಗುರುರೋರಧಿಕಂ' – ಗುರುವನ್ನು ಮೀರಿದಂಥವರಿಲ್ಲ. ಅರ್ಥಾತ್ ಗುರುತ್ವವೊಂದು ಅನಂತತ್ವದ ಗುಣ ಎಂಬ ನಿಲುವಿನಲ್ಲಿಯೇ ನಾವು ಗೌರವಿಸಿಕೊಂಡು ಬಂದಿದ್ದೇವೆ, ಆತ್ಮೀಯವಾಗಿ ಶರಣಾಗಿದ್ದೇವೆ. ರಾಮಾನುಜರಲ್ಲಿ ಅದು ಸರ್ವಾರ್ಪಣ ಎನಿಸುವ ಪ್ರಪತ್ತಿ : ಒಂದು ಗುರಿಯಾಯಿತು; ದಾಸರಲ್ಲಿ ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ ಎಂದಾಯಿತು. ಇಲ್ಲಿಯೂ ಅಪ್ರಶ್ನಿತ ಭಕ್ತಿಗೌರವ ಸಂದಾಯವಾಗಬೇಕು ಎಂಬ ಅರ್ಥವಿದೆ. ಶರಣರಲ್ಲಿ ಗುರುವು ದೇವನೂ ಹೌದು, ಮಾನವನು ಹೌದು ದೇವನಾಗಿ ಮಾನವನನ್ನು ಅರಿತು ಅವನ ಶಕ್ತಿಯನ್ನು ಅರಿವುಗೊಳಿಸಬೇಕು; ಮಾನವನಾಗಿ ದೇವನ ಆಚಾರ ವಿಚಾರಗಳನ್ನು ನಡೆ ನುಡಿಯಲ್ಲಿ ತೋರಬೇಕು ಎರಡರ ವಿಶ್ಲೇಷಣೆಯನ್ನು ಗುರುತಿಸಬಹುದು. ಕಾರಣ ಮಂಗಳ ಭಾವ ಶ್ರೇಯಭೋಗವಾಗಿ ಒದಗುತ್ತದೆ. ಅದುವೆ ಶಿವದ ಭಾವ.[೨೬]

ಇಂದಿನ ಸಮಾಜದಲ್ಲಿ 'ಗುರು'ವಿನ ಅರ್ಥ ಸೀಮಿತವಾಗಿರುವುದನ್ನು ಗಮನಿಸಬಹುದಾಗಿದೆ. ಧರ್ಮಗುರುಗಳನ್ನು ಸ್ವಾಮಿಗಳನ್ನು, 'ಗುರು' ಎಂದು ಕರೆಯುವ ಸಮಾಜ ಶಿಕ್ಷಕರನ್ನು, ಕಾಲೇಜು ಅಧ್ಯಾಪಕರನ್ನು 'ಗುರು' ಎಂದು ಕರೆಯುವುದಿಲ್ಲ. ಇಲ್ಲಿ ಗುರು ಶಿಷ್ಯರ ಸಂಬಂಧ ನಾಲ್ಕು ಗೋಡೆಯ ಒಳಗೆ ಸೀಮಿತಗೊಂಡಿದೆ. ತರಗತಿಯಿಂದ ಹೊರಬಂದಾಗ ಅವರಿಬ್ಬರ ಸಂಬಂಧ ಸ್ನೇಹವಾಗಿ ಮಾರ್ಪಡುತ್ತದೆ. ಆ ಸ್ನೇಹ ಸಂಬಂಧ ಅನೇಕ ಅನಾಹುತಗಳಿಗೆ ಕಾರಣವಾಗುತ್ತದೆ. ಅಧ್ಯಾಪಕರು ವಿದ್ಯಾರ್ಥಿಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಅನೇಕ ವಾಮ ಮಾರ್ಗಗಳನ್ನು ಅನುಸರಿಸುತ್ತಾರೆ. ಪ್ರಯೋಗಶಾಲೆ, ಆಂತರಿಕ ಮೌಲ್ಯಮಾಪನ ಇವುಗಳಿಂದ ವಿದ್ಯಾರ್ಥಿಗಳನ್ನು ಹೆದರಿಸಿ ತಮ್ಮ ಅಂಕೆಯಲ್ಲಿಟ್ಟುಕೊಳ್ಳಲು ಪ್ರಯತ್ನಿಸುವುದನ್ನು ಕಾಣಬಹುದಾಗಿದೆ. ಇಂತಹ ವಿಷಮ ಪರಿಸ್ಥಿತಿಯಲ್ಲಿ ವಿದ್ಯಾರ್ಥಿಗಳು ಶಿಕ್ಷಣವನ್ನು ಪಡೆಯಬೇಕಾಗಿದೆ. ಒಬ್ಬ ಸಮರ್ಥ ಅಧ್ಯಾಪಕನಾದವನಿಗೆ ವಿದ್ಯಾರ್ಥಿಗಳು ತಾವಾಗಿಯೇ ಶರಣಾಗುತ್ತಾರೆ. ತರಗತಿಯಲ್ಲಿ ಶ್ರದ್ಧೆಯಿಂದ ಪಾಠ ಕೇಳುತ್ತಾರೆ. ಅಂತಹ ಶಕ್ತಿಯನ್ನು ಅಧ್ಯಾಪಕರು ಪಡೆದುಕೊಂಡಾಗ ಆ ವೃತ್ತಿಗೊಂದು ಘನತೆ ಗೌರವ ಬರುತ್ತದೆ. ಘನತೆ, ಗೌರವಗಳನ್ನು ಬಲವಂತವಾಗಿ, ಒತ್ತಾಯಪೂರ್ವಕವಾಗಿ ಪಡೆಯುವುದಲ್ಲ.

೨೪. ಸಮಾಯೊಗ; ಷಣ್ಮುಖಯ್ಯ ಅಕ್ಕೂರಮಠ ಪ್ರ. ಶ್ರೀ ನಿ.ಪ್ರ. ನಿಜಗುಣ ಮಹಾಸ್ವಾಮಿಗಳು, ಶ್ರೀ ನಿಜಗುಣರ ಜಂಗಮಮಠ, ಗವಿಪುರ ಬಡಾವಣೆ, ಬೆಂಗಳೂರು – ೧೯, ಪುಟ-೧೬೬.
೨೫. ಮಹಾಮನೆ ಸಂ. ಎಂ.ಜಿ. ನಾಗರಾಜ್, ಎಚ್.ಎಸ್. ಸಿದ್ಧಗಂಗಪ್ಪ, ಸಂ. ೧, ಸಂಚಿಕೆ-೧೨, ಪುಟ-೬.
೨೬. ಮಹಾಮನೆ ಸಂ. ಎಂ.ಜಿ. ನಾಗರಾಜ್, ಎಚ್.ಎಸ್. ಸಿದ್ಧಗಂಗಪ್ಪ, ಸಂ. ೪, ಸಂಚಿಕೆ-೭, ಪುಟ-೭.

ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ತ್ರಿವಿಧ ದಾಸೋಹಿ, ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶಿಕ್ಷಕರ ಸ್ಥಾನಮಾನ, ಕರ್ತವ್ಯಗಳನ್ನು ಮನಮುಟ್ಟುವಂತೆ ವಿಶ್ಲೇಷಣೆ ಮಾಡಿದ್ದಾರೆ. ಅವರ ಅನುಗ್ರಹದ ನುಡಿ ಬೆಳಕು ಹೀಗಿದೆ :

"ಶಿಕ್ಷಕ ಗುರು, ತಂದೆ, ಸ್ನೇಹಿತ, ಮಾರ್ಗದರ್ಶಿ, ಮನುಷ್ಯ ನಿರ್ಮಾಣಶಿಲ್ಪಿ, ಸರಳ ಜೀವನ, ಉನ್ನತ ಚಿಂತನಕ್ಕೆ ಬೇರೊಂದು ಹೆಸರು ಅಧ್ಯಯನ, ಅಧ್ಯಾಪನ, ಜೀವನದ ಧ್ಯೇಯ ಹಾಗೂ ಧೋರಣೆಗಳು. ಮಾತೃಕರುಳು, ಪಿತೃಮೆದುಳು ತನ್ನ ಸ್ವಭಾವ, ಮಾನವ ಸಮಾಜವನ್ನು ಸದಾ ಉನ್ನತಿಯ ಕಡೆಗೆ, ಉತ್ತಮಿಕೆಯತ್ತ ಕರೆದೊಯ್ಯುವ ನೇತಾರ. ಪ್ರಜ್ಞೆಯನ್ನು ಪ್ರಭುವನ್ನು ಕತ್ತಲಿನಿಂದ ಬೆಳಕಿನೆಡೆಗೆ ಕೈಹಿಡಿದು ನಡೆಸುವ ಕರುಣಾಳು. ಒಂದು ಕಾಲದಲ್ಲಿ ಗ್ರಾಮೀಣ ಪರಿಸರದಲ್ಲಿ ದೈವ ಸ್ವರೂಪಿಯಾಗಿ ಗೌರವಿಸುತ್ತಿದ್ದ ಮನುಶ್ರೇಷ್ಠ. ಆತ್ಮ ಶ್ರೀಮಂತಿಕೆಯ ಧೀಮಂತ ವ್ಯಕ್ತಿ ನಡೆ-ನುಡಿಯನ್ನು ಒಂದಾಗಿಟ್ಟುಕೊಂಡ ಆದರ್ಶಜೀವಿ, ಸಮಾಜದ ಗೌರವಕ್ಕೆ ಪಾತ್ರನಾಗಿದ್ದು ಅನ್ಯಾಯ, ಅನೈತಿಕತೆಗಳನ್ನು ತಿದ್ದುವ ಧೈರ್ಯ ಉಳ್ಳಾತ. ಸತ್ಯ, ನಿಷ್ಠೆ ನೇರ ಪ್ರವೃತ್ತಿಯ ಶಿಕ್ಷಕನಂತೂ ಪ್ರಶಸ್ತಿ, ಪುರಸ್ಕಾರಗಳತ್ತ ಕಣ್ಣುಬಿಡದೆ ಆತ್ಮಾವಲೋಕನ ನಿರತನಾಗಿ ರಾಷ್ಟ್ರಯಜ್ಞದಲ್ಲಿ ಸೇವಾಮುಖಿಯಾಗಿರುವುದೊಂದೇ ತೃಪ್ತಿಪಡುವ ವಿಚಾರ. ಐವತ್ತು ಅರವತ್ತು ವರ್ಷಗಳ ಹಿಂದೆ ಕಾಣಬರುತ್ತಿದ್ದ ಶಿಕ್ಷಕರನ್ನು ಜ್ಞಾಪಿಸಿಕೊಂಡರೆ ಮನಸ್ಸು ಉಲ್ಲಾಸ ಪಡುತ್ತದೆ. ಆ ಕರ್ತವ್ಯ ನಿಷ್ಠೆ, ಚಾರಿತ್ರ್ಯಶುದ್ಧಿ, ಪಾಂಡಿತ್ಯ, ಪ್ರಖರಣೆ ಬರಬರುತ್ತ ಕಡಿಮೆಯಾಗುತ್ತಿರುವುದು ಶೋಚನೀಯವೆನಿಸುತ್ತದೆ. ಅಂದು ಶಿಕ್ಷಕ ಕೇವಲ ವಿದ್ಯಾರ್ಥಿಯ ಕಲ್ಯಾಣಕ್ಕೆ ಸೀಮಿತನಾಗಿರಲಿಲ್ಲ. ತಾನಿದ್ದ ಗ್ರಾಮದ 'ರಾಜಗುರು'ವಾಗಿದ್ದನೆಂಬುದನ್ನು ಸ್ಮರಿಸುವಾಗ ಅವನ ವ್ಯಕ್ತಿತ್ವದ ಅರಿವಾಗುತ್ತದೆ. ಇಂದು ಶಿಕ್ಷಕ ಆ ಮಟ್ಟಕ್ಕೆ ಬರುವಂತಾದರೆ ನಾಡು ಧನ್ಯವಾದೀತು'.[೨೭]

"ಜಗತ್ತಿನ ಇತಿಹಾಸ ಸ್ಫೂರ್ತಿ ಪಡೆದದ್ದು ಋಷಿಮುನಿಗಳಿಂದ ಸಾಧು-ಸಂತರಿಂದ, ದಾಸರು ಶರಣರಿಂದ; ತತ್ವಜ್ಞಾನಿಗಳಿಂದ ಅವರೆಲ್ಲರೂ ಶಿಕ್ಷಕರೇ ಆಗಿದ್ದರು. ಲೋಕಶಿಕ್ಷಕರಾಗಿ ಜೀವಿಸುತ್ತಿದ್ದರು. ಅಂಥವರ ಮಾತು ಶುದ್ಧವಾಗಿತ್ತು. ಮನಸ್ಸು ಶುದ್ಧವಾಗಿತ್ತು. ಶುದ್ಧತೆಗಾಗಿ ಬಾಳಿದರು, ಶುದ್ಧತೆಗಾಗಿ ಕಲಿಸಿದರು. ಶುದ್ಧತೆಗಾಗಿ ಲೋಕವನ್ನು ನಡೆಸಿದರು. ಅವರು ಕಂಡ ಶುದ್ಧತೆಯಲ್ಲಿ ಮಾನವೀಯತೆ ಇತ್ತು. ಅದನ್ನೇ ಬಿತ್ತಿದರು, ಬೆಳೆದರು, ಹಂಚಿದರು. ದಾಸಿಮಾರ್ಯರು ಹೇಳುವಂತೆ ಆ ಲೋಕ ಶಿಕ್ಷಕರು "*ಕರಿಯನ್ನು ಬೇಡಲಿಲ್ಲ ಸಿರಿಯನ್ನು ಬೇಡಲಿಲ್ಲ. ಹಿರಿದಪ್ಪ ರಾಜ್ಯವನ್ನು ಬೇಡಲಿಲ್ಲ. ಶರಣರ ಸೂಳ್ನುಡಿಯನ್ನು ಬೇಡಿದರು*". ಕಾರಣ, ಆ ಸೂಳ್ನುಡಿಗಳು ವಾಕ್‌ಶುದ್ಧಿಯ ದೀಪಗಳಾಗಿರುವುದರಿಂದ. ಅಂತೆಯೇ ತಮ್ಮ ಮನಸು 'ಅನ್ಯ ವಿಷಯಕ್ಕೆಳಿಸದಂತೆ' ಸದಾಶುದ್ಧಿಯ ತೀರ್ಥವಾಹಿನಿಯಾಗಿರುವುದರಿಂದ ವಿಷಯಾಸಕ್ತ ಜ್ಞಾನಕ್ಕಿಂತ ಶಿವಜ್ಞಾನ ಶ್ರೇಷ್ಠವೆಂಬ ಶುದ್ಧಿಯ ಬೆಳಕು ಅವರದಾಗಿರುವುದರಿಂದ. ಇಂದು ನಮ್ಮಲ್ಲಿ ಶಿಕ್ಷಕರು ಬಹಳ ಮಂದಿ ಜ್ಞಾನದಾಹಿಗಳಾಗುತ್ತಿಲ್ಲ. ಅಧ್ಯಯನಶೀಲರಾಗಿಲ್ಲ. ಭೋಗ ಜೀವನಾಕಾಂಕ್ಷಿಗಳಾಗುತ್ತಿರುವುದು ಭಾರತೀಯ ಸಂಸ್ಕೃತಿಗೆ ಒಳ್ಳೆಯದಲ್ಲ. ಶಿಕ್ಷಕ ನೀತಿ ಸಂಪನ್ನನಾಗಿರಬೇಕು; ಚಾರಿತ್ರ್ಯಶುದ್ಧಿಯ ಒಡೆಯನಾಗಬೇಕು. ಪ್ರೀತಿ ಪ್ರೇಮಗಳ ಸತ್ವಜೆಯಾಗಿರಬೇಕು. ಜೂಜು, ಕುಡಿತ, ಅನೈತಿಕ ವ್ಯಸನಗಳಿಂದ ಮುಕ್ತನಾಗಿರಬೇಕು. ಏಕೆಂದರೆ ಆಚಾರ್ಯಸ್ಥಾನ ಪರಮ ಪವಿತ್ರವಾದುದು. ಇಹ-ಪರಗಳೆರಡನ್ನೂ ಶುದ್ಧಗೊಳಿಸುವ ಕಾರ್ಯಕ್ಷೇತ್ರ. ಯಾರು ಏನೆಂದರು ತಾನು ಸಮಾಜಕ್ಕೆ ಇರುವವನು ಎಂಬ ಜಾಗೃತ ಜೀವಿಯಾಗಿರಬೇಕು''.[೨೮]

"ಶಿಕ್ಷಣ ಕ್ಷೇತ್ರ ಎಲ್ಲರೂ ಆಯ್ದುಬಿಟ್ಟ ಕ್ಷೇತ್ರವಲ್ಲ. ಇದೊಂದು ಸಾಧನೆಯ ಕರ್ಮಕ್ಷೇತ್ರ. ಎಲ್ಲಿಯೂ ಸಲ್ಲದವರು ಇಲ್ಲಿ ಸಲ್ಲುವರು ಎಂಬ ಭಾವನೆ ಸಲ್ಲದು. ಇಲ್ಲಿ ಸಲ್ಲುವರು ಎಲ್ಲಿಯೂ ಸಲ್ಲುವರೆಂಬುದನ್ನು ನಮ್ಮ ಇತಿಹಾಸವೇ ಸ್ಪಷ್ಟಪಡಿಸಿದೆ. ಬುದ್ಧ, ಬಸವ, ಶಂಕರ, ಮಹಾವೀರ, ಬಸವಣ್ಣನಂತಹ ಲೋಕ ಶಿಕ್ಷಕರಿಗೆ ಜನ್ಮಕೊಟ್ಟ ರಾಷ್ಟ್ರ ಭರತಖಂಡ. ಡಾ. ರಾಧಾಕೃಷ್ಣ, ಲಾಲ್ ಬಹದ್ದೂರ್ ಶಾಸ್ತ್ರಿಗಳಂಥ ಮೇಧಾವಿ ಶಿಕ್ಷಕರು ಜನ್ಮತಾಳಿದ ಪುಣ್ಯಭೂಮಿ ಭಾರತ. ಆದರೆ ಅವರು ಸಾರಿಹೋದ ಸಂದೇಶಗಳು ಇಂದು ಕಣ್ಮರೆಯಾಗಿವೆ. ಅವರು ನುಡಿದ ಸಾರ್ವಕಾಲಿಕ ಧರ್ಮ ಸಂದೇಶಗಳನ್ನು ಶಿಕ್ಷಣದಲ್ಲಿ ತಿಳಿಸುವಂತಹ ವ್ಯವಸ್ಥೆ ಮಾಡಬೇಕಾಗಿದೆ. ವಿಜೃಂಭಿಸುತ್ತಿರುವ ವೈಜ್ಞಾನಿಕ ಸಾಧನೆಗಳು ನಾಗರಿಕತೆ ಮತ್ತು ಸಂಸ್ಕೃತಿಗಳ ಮೇಲೆ ಧಾಳಿ ಮಾಡಿವೆ. ತಾಂತ್ರಿಕ ಜ್ಞಾನದ ಪ್ರಗತಿಯನ್ನಿಂದು ಮಾನವೀಯ ಮೌಲ್ಯಗಳಿಗೆ

೨೭. ಶ್ರೀ ಸಿದ್ಧಗಂಗಾ ಶ್ರೀಗಳವರ ನುಡಿಬೆಳಕು. ಸಂ. ಶ್ರೀ ಸಿದ್ಧಲಿಂಗ ಸ್ವಾಮಿಗಳು, ಪ್ರ. ಶ್ರೀ ಸಿದ್ಧಗಂಗಾ ಪ್ರಕಾಶನ. ಪುಟ-೧೩೬.
೨೮. ಅದೇ ಪುಟ ೩೩.





ಧಕ್ಕೆಯಾಗದ ರೀತಿಯಲ್ಲಿ ನೋಡಿಕೊಳ್ಳಬೇಕಾಗಿದೆ. ಜೀವನಾತ್ಮಕ ದೃಷ್ಟಿ ಬದಲಾಗಿ ಜೀವಕಲ್ಯಾಣದೃಷ್ಟಿ ಪುನರುದಯವಾಗಬೇಕು.

ಶಿಕ್ಷಕ ಎಲ್ಲಕ್ಕೂ ಮೊದಲ ಚಾರಿತ್ರ್ಯಶುದ್ಧಿಯನ್ನು ಕಾಪಾಡಿಕೊಳ್ಳಬೇಕು. ಆಚಾರ್ಯ ಪದವಿ ಸಹಾ ಜಾಗೃತವಾಗಿರುವಂಥದ್ದು, ಸಮಾಜ ಅದರಲ್ಲೂ ತನ್ನ ಬಳಿಗೆ ಕಲಿಯಲು ಬರುವ ವಿದ್ಯಾರ್ಥಿಗಳು ತೆರೆದ ಕಣ್ಣಿನಿಂದ ಶಿಕ್ಷಕನನ್ನು ನೋಡುತ್ತಿರುತ್ತದೆ. ಅಧ್ಯಯನಶೀಲನಾಗದವ ಸಮರ್ಥ ಶಿಕ್ಷಕನಾಗಲಾರ. ಅವನೊಂದು ಚಲಿಸುವ ಜ್ಞಾನಭಂಡಾರ. ಎಪತ್ತು – ಎಂಬತ್ತು ವರ್ಷಗಳ ಹಿಂದೆ ಇದ್ದ ಶಿಕ್ಷಕ ಶ್ರೇಷ್ಠರು ಇಂದು ವಿರಳವಾಗುತ್ತಿರುವುದು ವಿಷಾದನೀಯ. ಸತ್ಯ ಜೀವನ ಉನ್ನತ ಚಿಂತನಕ್ಕೆ ಭಾಷ್ಯವಾಗಿದ್ದ ವಿಶ್ವವಿದ್ಯಾಲಯಗಳಲ್ಲಿದ್ದ ಪ್ರಾಧ್ಯಾಪಕರು ಈಗ ಅಪರೂಪವಾಗುತ್ತಿದ್ದಾರೆ. ಜೀವನದ ಎಲ್ಲ ಕ್ಷೇತ್ರಗಳು ಅಪಮೌಲ್ಯಗೊಳ್ಳುತ್ತಿದೆ. ಅವು ಸುಧಾರಿಸಬೇಕಾದರೆ ಶಿಕ್ಷಕರು ಮತ್ತು ಮಾತೆಯರು ಸಂಕಲ್ಪ ಚಿತ್ತರಾಗಬೇಕು.''[೨೯]

**ಗು**ರು ಸ್ಥಾನ ಅಥವಾ ಶಿಕ್ಷಕ ಸ್ಥಾನದಲ್ಲಿರುವವರು ಸಮಾಜ ತನಗೆ ನೀಡುವ ಗೌರವಕ್ಕೆ, ಯೋಗ್ಯತೆಗೆ ಪಾತ್ರನಾಗಿದ್ದೇನೆಯೆ ಎಂಬುದನ್ನು ಚಿಂತಿಸಬೇಕು. ಅವರು ತಮ್ಮನ್ನು ತಾವು ವಿಮರ್ಶೆ ಮಾಡಿಕೊಳ್ಳಬೇಕು. ಆಸ್ಥಾನಕ್ಕೆ ತಕ್ಕಂತೆ ಯೋಗ್ಯತೆಯನ್ನು ಸಂಪಾದಿಸಬೇಕು. ಅಪಾರವಾದ ಜ್ಞಾನಭಂಡಾರವನ್ನು ತನ್ನದಾಗಿಸಿಕೊಳ್ಳಬೇಕು. ಆ ಅರ್ಹತೆಯನ್ನು ಕಷ್ಟಪಟ್ಟು ಸಂಪಾದಿಸಬೇಕು. ಅವರಲ್ಲಿ ನಡೆ-ನುಡಿಗಳು ಒಂದೇ ಆಗಿದ್ದಾಗ ಮಾತ್ರ ಆ ಸ್ಥಾನಕ್ಕೆ ಗೌರವ, ಮನ್ನಣೆ ತಾನಾಗಿಯೇ ದೊರೆಯುತ್ತದೆ. ಶಿಕ್ಷಕ ವೃತ್ತಿ ಪವಿತ್ರವಾದುದೆಂದು ಭಾವಿಸಿ ಆ ವೃತ್ತಿ ಸೇವೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳಬೇಕು. ಆ ಸೇವೆ ಸತ್ಯ ಶುದ್ಧವಾಗಿರಬೇಕು.

★

೨೯. ಅದೇ ಪುಟ-೧೩೯.

ಪ್ರೀತಿ, ವಿಶ್ವಾಸ, ನ್ಯಾಯ, ಸಮಾನತೆ, ಹೊಂದಾಣಿಕೆ, ವಿಶಾಲ ಹೃದಯ, ಜನಸಾಮಾನ್ಯರ ಬಗ್ಗೆ ಕಳಕಳಿ ಮತ್ತು ಪ್ರಾಮಾಣಿಕತೆ ಇವು ಪ್ರತಿಫಲಕ್ಕಾಗಿ ಮಾಡುವ ಸೇವೆಯಲ್ಲಿ ಕಂಡುಬರುವುದಿಲ್ಲ.

– ಡಾ. ಡಿ.ಎಂ. ನಂಜುಂಡಪ್ಪ

## ಸಿದ್ಧಗಂಗಾ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಸನ್ಮಾನ್ಯರೇ,

ಕಳೆದ ನಲವತ್ತು ವರ್ಷಗಳಿಂದ, ಪರಮಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಮತ್ತು ಮಾರ್ಗದರ್ಶನದಿಂದ ಶ್ರೀಮಠದ ಮುಖವಾಣಿಯಾಗಿ ಪ್ರಕಟವಾಗುತ್ತಿರುವ 'ಸಿದ್ಧಗಂಗಾ' ಮಾಸಪತ್ರಿಕೆಗೆ ಆಜೀವ ಚಂದಾದಾರರಾಗುವುದರ ಮೂಲಕ ಪತ್ರಿಕೆಯ ಮುನ್ನಡೆಗೆ ಕಾರಣಕರ್ತರಾಗಿದ್ದೀರಿ. ಈ ಸಂದರ್ಭದಲ್ಲಿ ತಮ್ಮ ಸಹಕಾರವನ್ನು ತುಂಬು ಹೃದಯದಿಂದ ಸ್ಮರಿಸುತ್ತೇವೆ.

ದಿನೇ ದಿನೇ ಮುದ್ರಣ ಸಾಮಗ್ರಿಗಳ ವೆಚ್ಚ ಅಧಿಕವಾಗುತ್ತಿದ್ದು ಅದಕ್ಕನುಗುಣವಾಗಿ ಪತ್ರಿಕೆಯ ಮುದ್ರಣದ ಬೆಲೆಯೂ ಹೆಚ್ಚಾಗುತ್ತಿದೆ. ರೂ. ೫೦೦/೬೦೦ಗಳನ್ನು ನೀಡಿದ ಆಜೀವ ಚಂದಾಹಣವನ್ನು ನಿಶ್ಚಿತ ಠೇವಣಿಯಲ್ಲಿ ತೊಡಗಿಸಿದ್ದು ಅದರಿಂದ ಬರುವ ಬಡ್ಡಿ ಹಣದಿಂದ ಪತ್ರಿಕೆಯನ್ನು ಪ್ರಕಟಿಸಲು ಕಷ್ಟಸಾಧ್ಯವಾಗಿದೆ. ಈಗ ಬ್ಯಾಂಕಿನ ಬಡ್ಡಿ ದರವು ಕಡಿಮೆ ಆಗಿರುವ ವಿಚಾರ ತಮಗೆ ತಿಳಿದಿದೆ. ಪ್ರಸ್ತುತ ೫೦೦ ರೂ. ಠೇವಣಿಗೆ ೩೨.೫೦ ರೂ. ಹಾಗೂ ೬೦೦ ರೂ.ಗಳಿಗೆ ೩೯ ರೂ ಬರುತ್ತದೆ. ಈ ಬಡ್ಡಿ ಹಣದಿಂದ ೧೨ ಸಂಚಿಕೆಗಳಿಗೆ ತಗಲುವ ವೆಚ್ಚವನ್ನು ಸರಿದೂಗಿಸಲು ಕಷ್ಟವಾಗಿದೆ. ಪ್ರಸ್ತುತ ಶೇಕಡ ೫೦ರಷ್ಟು ನಷ್ಟವಾಗುತ್ತಿದೆ ಎಂಬ ಅಂಶವನ್ನು ವಿನಯ ಪೂರ್ವಕವಾಗಿ ತಮ್ಮ ಗಮನಕ್ಕೆ ತರಬಯಸುತ್ತೇವೆ.

ಪ್ರಸ್ತುತ ಶ್ರೀಮಠದಲ್ಲಿ ೮೦೦೦ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವ್ಯಭವಿಷ್ಯವನ್ನು ರೂಪಿಸುವಲ್ಲಿ ಪರಮಪೂಜ್ಯ ಶ್ರೀಗಳವರು ತಮ್ಮನ್ನು ಅರ್ಪಿಸಿಕೊಂಡು ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ. ತಾವು ದಯವಿಟ್ಟು ಪೂಜ್ಯ ಶ್ರೀ ಶ್ರೀಗಳವರು ಸಲ್ಲಿಸುತ್ತಿರುವ ಶ್ರೇಷ್ಠ ಸೇವೆಯನ್ನು ಗಮನದಲ್ಲಿಟ್ಟುಕೊಂಡು 'ಸಿದ್ಧಗಂಗಾ' ಪ್ರಕಟಣೆಗೆ ಒದಗಿರುವ ಆರ್ಥಿಕ ಸಂಕಷ್ಟವನ್ನು ದೂರಮಾಡಿ ಸಿದ್ಧಗಂಗಾ ಮತ್ತಷ್ಟು ಅರ್ಥಪೂರ್ಣವಾಗಿ ಪ್ರಕಟವಾಗಲು ನೆರವು ಮತ್ತು ಸಹಕಾರ ನೀಡಬೇಕಾಗಿ ಕಳಕಳಿಯಿಂದ ಕೋರುತ್ತೇವೆ.

ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅಪ್ಪಣೆಕೊಡಿಸಿದಂತೆ ಜುಲೈ ೨೦೦೪ರಿಂದ ಆಜೀವ ಚಂದಾಹಣವನ್ನು ೬೦೦ ರಿಂದ ೧೦೦೦ ರೂ.ಗಳಿಗೆ ಹೆಚ್ಚಿಸಲಾಗಿದೆ.

ಈಗಾಗಲೇ ಆಜೀವ ಚಂದಾದಾರರಾಗಿರುವ ಪತ್ರಿಕಾಭಿಮಾನಿಗಳು ೧೦೦೦ ರೂ.ಗಳಿಗೆ ಸರಿಹೊಂದುವಂತೆ. ಅಂದರೆ ಹಿಂದೆ ಸಂದಾಯ ಮಾಡಿದ್ದ ೫೦೦ ರೂ. ಮತ್ತು ೬೦೦ ರೂ.ಗಳನ್ನು ಕಳೆದು ಉಳಿದ ಹಣವನ್ನು ರೂ. ೫೦೦ ಮತ್ತು ರೂ. ೪೦೦ಗಳನ್ನು ನಗದು/ಎಂಓ/ಡಿ.ಡಿ./ಚೆಕ್ ಮೂಲಕ ಸಿದ್ಧಗಂಗಾ ಮಾಸಪತ್ರಿಕೆಯ ಹೆಸರಿನಲ್ಲಿ ಕಳುಹಿಸಬೇಕಾಗಿ ಕೋರಲಾಗಿದೆ. ತಾವು ಹಣ ಕಳುಹಿಸುವಾಗ ತಮ್ಮ ವಿಳಾಸದಲ್ಲಿ ಎಲ್.ಎಂ. ಸಂಖ್ಯೆಯನ್ನು ತಪ್ಪದೆ ನಮೂದಿಸಬೇಕು. ತಾವು ನಮ್ಮ ಮನವಿಗೆ ಸ್ಪಂದಿಸಿ ಪತ್ರಿಕೆಯ ಸರ್ವತೋಮುಖ ಅಭಿವೃದ್ಧಿಗೆ ಸಹಕರಿಸುವಿರೆಂದು ಭಾವಿಸಿದ್ದೇವೆ.

ಹೆಚ್.ಬಿ. ಗಂಗಾಧರಯ್ಯ
ಪ್ರಕಾಶಕರು

# ನೋಟವೇ ಪ್ರಾಣವಾದ ಪ್ರಾಣಲಿಂಗ ಯೋಗ !

– ಪ್ರೊ. ಜಿ.ಎಚ್. ಹನ್ನೆರಡು ಮಠ
ಯೋಗಭವನ : ಇಂದ್ರಪ್ರಸ್ಥ
ನ್ಯಾಶನಲ್ ಪಾರ್ಕ್ ರಸ್ತೆ ಗೊಟ್ಟಿಗೆರೆ ಅಂಚೆ,
ಬೆಂಗಳೂರು – 560 083.
ದೂರವಾಣಿ : 080-8429981

**ಮಾ**ವು, ಬೇವು, ಹುಣಸೆ ಮರಗಳು ಗಿಡತುಂಬ ಹೂಬಿಟ್ಟಾಗ ಎಂಥಾ ಸೊಗಸು! ಮಣ್ಣಿನ ಮಕ್ಕಳಾದ ದಾರಿಕಾರರು ಕಣ್ತುಂಬ ಆ ಮರಗಳನ್ನು ನೋಡಿ; ಹಸಿವು-ಹೈರಾಣವನ್ನು ಕ್ಷಣಹೊತ್ತು ಮರೆಯುವುದಿಲ್ಲವೇ? ಇದೆಂಥಾ ಸ್ವಪ್ನ ವಿಲಾಸ!

**ದುಂ**ಬಿಗಳು, ಬಣ್ಣ ಬಣ್ಣದ ಚಿಟ್ಟೆಗಳು, ಜೇನುಗಳು ಆ ಹೂಗಳ ಮೇಲೆ ಜೀವನೋತ್ಸಾಹದಿಂದ ... ಹಸಿದು ಬಂದ ವಸಂತ ದೇವತೆಗಳಂತೆ ... ಎರಗಿ; ಹೂಗಳ ಪರಾಗಧೂಳಿಯೊಂದಿಗೆ ಓಕುಳಿಯಾಡುವುದಿಲ್ಲವೆ? ಇದು ಎಂಥಾ ಪ್ರೀತಿ!

**ಬಿ**ಸಿಲು-ಗಾಳಿಗಳ ಸ್ನೇಹ, ಬಾನು-ಭುವಿಗಳ ಸ್ನೇಹ, ಹಸಿರು-ಹೂವು-ಪಕ್ಷಿಗಳ ನಲ್ಲೊಲವು, ಗಂಡು-ಹೆಣ್ಣಿನ ಪ್ರೇಮ, ತಾಯಿ-ಮಗುವಿನ ಕಕ್ಕುಲಾತಿ... ಸಮಗ್ರ ಪೃಥ್ವಿಯ ಸುಂದರ ವಿಕಾಸವೇ ಸ್ನೇಹಶೀಲ! ಪ್ರೇಮಪೂರ್ಣ!

ಪ್ರೀತಿಯೆಂಬ ಸೂತ್ರ ಇಲ್ಲದ ಸೃಷ್ಟಿ ಕ್ರಿಯೆಯೇ ಇಲ್ಲ. ಪ್ರಕೃತಿಯ ಬೀಜಮಂತ್ರವೇ ಪರಸ್ಪರಾಲಂಬನೆಯೆ ಸ್ನೇಹ ಕಂಪನ.

ಸ್ನೇಹ ತಪ್ಪಿದಾಗ ಪ್ರಾಣಿಗಳು ಸಂಘರ್ಷಣೆಗೆ ಇಳಿಯುತ್ತವೆ. ರಾಜರು ರಾಜರನ್ನು ಉಚ್ಚಾಟನೆ ಮಾಡುತ್ತಾರೆ. ಸಾಮ್ರಾಜ್ಯಗಳು ಸಾಮ್ರಾಜ್ಯಗಳನ್ನು ಕೊಳ್ಳೆ ಹೊಡೆದು ಧ್ವಂಸ ಮಾಡುತ್ತವೆ. ಧರ್ಮಗಳು ಧರ್ಮಗಳನ್ನು ಆಕ್ರಮಣಮಾಡಿ ರಕ್ತದ ಕೋಡಿ ಹರಿಸುತ್ತವೆ. ಭಾಷೆಗಳು ಭಾಷೆಗಳ ಮೇಲೆ ಸವಾರಿಮಾಡಿ ಸದೆಬಡಿಯುತ್ತವೆ. ಜನಾಂಗಗಳು ಜನಾಂಗಗಳ ಮೇಲೆ ಆಕ್ರಮಣಮಾಡಿ ಅವರ ಸಾರ ಸಂಸ್ಕೃತಿಯ ಸೆಲೆಯನ್ನೇ ಮಣ್ಣುಪಾಲು ಮಾಡುತ್ತವೆ ... ಹೀಗೆ ... ಒಂದೇ ಎರಡೇ? ಇದರ ಫಲವಾಗಿಯೇ ಇಂದು ಪೋಲಿಸ್‌ಪಡೆ, ಸೈನ್ಯ, ಯುದ್ಧವಾಹನಗಳು ಮಾರಕಾಸ್ತ್ರಗಳು, ಬಾಂಬುಗಳು, ಭಯೋತ್ಪಾಧಕತೆ ಇತ್ಯಾದಿ ಕ್ರೂರ ವೈಪರೀತ್ಯಗಳು!

ಸ್ನೇಹದಿಂದ ಸಾಗರ ನಗುತ್ತವೆ, ಮುಗಿಲುಗಳು ಮಳೆಗರೆಯುತ್ತವೆ, ಹೊಳೆಗಳು ಅರಣ್ಯಗಳನ್ನು ಆಲಿಂಗಿಸುತ್ತವೆ, ಮಾನವ ಮಾನವರೊಂದಿಗೆ ಸಹಬಾಳುವೆ ಗೈದು ಸಲಹುತ್ತಾನೆ. ಬಡವರ ರಕ್ಷಣೆ-ರೋಗಿಗಳ ಹಾರೈಕೆ-ಗಾಯಾಳುಗಳ ಶುಶ್ರೂಷೆ, ವೃದ್ಧರ ಪೋಷಣೆ, ಮಕ್ಕಳ ಪಾಲನೆ, ಅನಾಥರ ಆಶ್ರಯ, ಸ್ತ್ರೀಯರ ರಕ್ಷಣೆ, ಒಂದೇ-ಎರಡೇ ಪ್ರೀತಿಗೆ ನೂರೆಂಟು ಟೊಂಗೆ ಟಸಿಲುಗಳು!

ವ್ಯಕ್ತಿಯೊಬ್ಬನ ದಿಢೀರ ಪ್ರಗತಿ, ಸಮೃದ್ಧಿ, ಸುಖ, ಸೌಲಭ್ಯಗಳನ್ನು ಗಮನಿಸಿ ಅನೇಕರಿಗೆ ಹೊಟ್ಟೆಯುರಿ, ಇರುಸು ಮುರುಸು, ಕರುಬು! ಈ ಮತ್ಸರದ ದಾರಿಯಲ್ಲಿ ದ್ವೇಷ, ಅನೂಯೆಗಳು ಮೂಡಿದಾಗ ಸ್ನೇಹದ ಬೇರಿಗೆ ಕೊಡಲಿ ಪೆಟ್ಟು ತಗಲುತ್ತದೆ. ಸ್ವಾರ್ಥ, ದುರಾಸೆ, ಪಿಪಾಸೆ, ಹಪಾಹಪಿಗಳಿಂದ ಪ್ರೀತಿಯೆ ಜೀವಸತ್ವವೇ ಸುಟ್ಟು ಭಸ್ಮವಾಗುತ್ತದೆ. ಅತ್ತೆ ಸೊಸೆಯರ ಕಿತ್ತಾಟ, ಗಂಡ-ಹೆಂಡಿರ ಕದನ, ಬಂಧು ಮಿತ್ರರ ಜಗಳ, ಹೊಲಮನೆಯ ವ್ಯಾಜ್ಯ, ಆಸ್ತಿ, ಸಂಪತ್ತು, ಸವಲತ್ತುಗಳ ಸಂಘರ್ಷ, ಮಕ್ಕಳ ಕಚ್ಚಾಟ, ದೇಶ, ಭಾಷೆ, ಜನಾಂಗ, ಜಾತಿಗಳ ಹಣಾಹಣಿ ... ಇವೆಲ್ಲಾ ಸಹಸ್ರ ವಿಷ ವರ್ತುಲಗಳು. ಕಳವು, ಆಕ್ರಮಣ, ಲೂಟಿ, ದಬ್ಬಾಳಿಕೆ, ಮೋಸ, ವಂಚನೆ, ಹಿಂಸೆ ಶೋಷಣೆ, ಜಾತೀಯತೆ, ಜಾತ್ಯಂಧತೆ, ಲಂಚ, ಸ್ವಜನ ಪಕ್ಷಪಾತ, ಹಗರಣಗಳೆಲ್ಲ ಇದರ ನಿರಂತರ ವೈಪರೀತ್ಯಗಳು.

**ಈ** ತಾಮಸ ಶಕ್ತಿಗಳ ಆಚೆಗೆ; ಸಮಸ್ತ ಸೃಷ್ಟಿಯೇ ತನ್ನ ಸಮಗ್ರ ವಿಕಾಸದಲ್ಲಿ ಶಿವಪ್ರಜ್ಞೆಯ ಮಹಾಬೆಳಕಿನತ್ತ ಅವ್ಯಕ್ತವಾಗಿ ಸಾಗಿದೆಯೆಂದು ಶ್ರೀ ಅರವಿಂದರು ಹೇಳಿದ್ದಾರೆ. ಈ ಮಹಾಪರಿವರ್ತನೆಯ ಸಮ್ಯಕ್ ಸಂಚಲನೆಯಲ್ಲಿ ಅವರು ''ಸಮಸ್ತ ಜೀವನವೇ ಯೋಗ'' ಎಂಬ ಸಿದ್ಧಾಂತವನ್ನು ತಮ್ಮ ''ಯೋಗಸಮನ್ವಯ'' ಗ್ರಂಥದಲ್ಲಿ ಸಾರಿದರು.

**ಈ** ಅರ್ಥದಲ್ಲಿ ಸ್ನೇಹವು ದೇಹಾಭಿಮಾನದಿಂದ ಜಡ ಜಡೀಭೂತವಾದಾಗ ಅದರ ದುಷ್ಪರಿಣಾಮಗಳು ಸುತ್ತಮುತ್ತಲ





ಪರಿಸರವನ್ನು ಪ್ರದೂಷಿತಗೊಳಿಸುತ್ತವೆ. ದೇಹಾಭಿಮಾನವೇ ಸರ್ವವಿನಾಶಗಳ ಪ್ರಥಮಬೀಜ. ಆತ್ಮಾಭಿಮಾನವು ಸಕಲ ಸದ್ಗುಣಗಳ ಮೊದಲ ಬೆಳಗು. ಜಡಸಂಸ್ಕೃತಿ, ಜಡ ಆಕರ್ಷಣೆಗಳಿಂದ ಪಾರಾಗಿ ನಮ್ಮ ಆತ್ಮ ಚೇತನ ಊರ್ಧ್ವಮುಖಿಯಾಗಿ ಶಿವಸ್ನೇಹದ ಎತ್ತರಕ್ಕೆ ತೆರೆದುಕೊಂಡರೆ ದೇವ ಪ್ರಜ್ಞಾಪುಷ್ಪಿ ಅರಳಿ ಗಮಗಮಿಸುತ್ತದೆ. ಆತ್ಮ-ಪರಮಾತ್ಮರ ಸಮಾಗಮವೇ ಸ್ನೇಹದ ಶಿಖರ ಸಾಧನೆ ... ಅದೇ ಅಂತರಂಗದ ಅರುಹಿನ ಕೂಡಲಸಂಗಮ! ಈ ಮಹಾಸಂಗಮದ ಮಧುರ ದಾರಿಯಲ್ಲಿ ಸಾಗಿದಾಗ ಈ ಸಂಕೀರ್ಣ ಬಾಳಿನ ಸಹಸ್ರ ದ್ವಂದ್ವಗಳಿಗೂ ಉತ್ತರ ಸಿಗುತ್ತದೆ. ಆಗ ಮುಳ್ಳು ಮಲ್ಲಿಗೆಯಾಗುತ್ತದೆ, ಹಾವು ಗೋವಾಗುತ್ತದೆ, ಕಲ್ಲು ಬೆಲ್ಲವಾಗುತ್ತದೆ!

ಇಂಥ ಆತ್ಮರತಿ ಶಿವಸ್ಮೃತಿಯಲ್ಲಿ ಮೊಗ್ಗೊಡೆದು ಹೂವಾದಾಗ ಬರುವ ಭಾವನೆಯ ಕಂಪು-ತಂಪುಗಳನ್ನು ಆಸ್ವಾದಿಸಿರಿ.

*''ಅಂಗೈಯೊಳಗಣ ಲಿಂಗವ ನೋಡುತ್ತ*
*ಕಂಗಳು ಕಡೆಗೋಡಿವರಿವುತ್ತ ಸುರಿಯುತ್ತ ಎಂದಿಪ್ಪೆನೊ?*
*ನೋಟವೇ ಪ್ರಾಣವಾಗಿ ಎಂದಿಪ್ಪೆನೋ?*
*ಕೂಟವೇ ಪ್ರಾಣವಾಗಿ ಎಂದಿಪ್ಪೆನೋ?*
*ಎನ್ನಂಗವಿಕಾರದ ಸಂಗವಳಿದು*
*ಕೂಡಲಸಂಗಯ್ಯಾ ... ಲಿಂಗ ... ಲಿಂಗ ... ಲಿಂಗವೆನ್ನುತ್ತ!''*

ಸ್ನೇಹಶಕ್ತಿ ಅಂತರಾತ್ಮನ ಲಿಂಗರತಿಯಲ್ಲಿ ಮಿಂದು ಮಡಿಯಾದಾಗ ಬರುವ ಭಾವದ ಸೂಕ್ಷ್ಮಸ್ಪಂದನಗಳನ್ನು ಸವಿಯಬಹುದು.

*''ಎನಗೆ ನಿಮ್ಮ ನೆನಹಾದಾಗಲೆ ಉದಯ*
*ಎನಗೆ ನಿಮ್ಮ ಮರಹಾದಾಗಲೆ ಅಸ್ತಮಾನ*
*ಎನಗೆ ನಿಮ್ಮ ನೆನಹವೆ ಜೀವನ*
*ಎನಗೆ ನಿಮ್ಮ ನೆನಹವೆ ಪ್ರಾಣಕಾಣಾ ತಂದೇ ಸ್ವಾಮಿ!*
*ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯಾ*
*ವದನದಲ್ಲಿ ಷಡಕ್ಷರಿಯೆ ಬರೆಯಯ್ಯಾ ಕೂಡಲಸಂಗಮದೇವಾ!''*

ಹೀಗೆ ಭಕ್ತಿಯೋಗದ ವಿಕಾಸವೇ ಆತ್ಮಜ್ಞಾನದ ಶ್ರೀ ಶಿಖರ. ಅಧೋಮುಖಿಯಾದ ತಾಮಸಪ್ರಜ್ಞೆ ಊರ್ಧ್ವಮುಖಿಯಾಗಿ ಅರಳಿದಾಗ ಈ ಭುವನವೇ ಕಲ್ಯಾಣರಾಜ್ಯ! ಆಗ ''ಆಚಾರವೇ ಸ್ವರ್ಗ ಅನಾಚಾರವೇ ನರಕ''! ಈ ಮಣ್ಣು ಮೃದಂಗವಾದಾಗ ಇದೇ ಭೂಸ್ವರ್ಗ! ಇದೇ ಸಹಜ ಶಿವಯೋಗದ ಸುಂದರ ಸ್ನೇಹ ಶ್ರೀಶೈಲ! ★

## ಶ್ರದ್ಧಾಂಜಲಿ



ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದಲ್ಲಿ ಎಂ.ಬಿ.ಎ. ವಿಭಾಗದ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಾ ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದ ಪ್ರೊ. ಮಾಲತಿ ಬೋಲಾರ ಅವರು ದಿನಾಂಕ ೦೨-೦೨-೨೦೦೫ ರಂದು ವಿಧಿವಶರಾದರೆಂದು ತಿಳಿಸಲು ''ಸಿದ್ಧಗಂಗಾ'' ವಿಷಾದಿಸುತ್ತದೆ.

ಸರಳತೆ, ಸಜ್ಜನಿಕೆ, ಸಹೃದಯತೆಯನ್ನು ಮೈಗೂಡಿಸಿಕೊಂಡಿದ್ದ ಪ್ರೊ. ಬೋಲಾರ ಅವರು ಶ್ರದ್ಧೆ, ಪ್ರಾಮಾಣಿಕತೆ ಹಾಗೂ ದಕ್ಷತೆಗೆ ಉತ್ತಮ ನಿರ್ದಶನರಾಗಿದ್ದರು. ನಾಡಿನ ಹಾಗೂ ರಾಷ್ಟ್ರಮಟ್ಟದ ಹಲವಾರು ಪ್ರತಿಷ್ಠಿತ ಸಂಸ್ಥೆಗಳಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿ ಆಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದುಕೊಟ್ಟ ಹೆಗ್ಗಳಿಕೆ ಇವರದು. ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ಮಟ್ಟದಲ್ಲಿ ನಡೆದ ಸಮ್ಮೇಳನ ಹಾಗೂ ವಿಚಾರ ಸಂಕಿರಣಗಳಲ್ಲಿ ವಿದ್ವತ್‌ಪೂರ್ಣ ಪ್ರಬಂಧಗಳನ್ನು ಮಂಡಿಸಿ ಎಲ್ಲರ ಗಮನವನ್ನು ಸೆಳೆದಿದ್ದ ಶ್ರೇಷ್ಠ ವಿದ್ವಾಂಸರಾಗಿದ್ದರು.

ಶ್ರೀಮಠ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರ ಬಗ್ಗೆ ಅಪಾರ ಗೌರವ, ಭಕ್ತಿಯನ್ನಿಟ್ಟುಕೊಂಡಿದ್ದ ಪ್ರೊ. ಮಾಲತಿ ಬೋಲಾರ ಅವರು ಸಿದ್ಧಗಂಗಾ ವಿದ್ಯಾಸಂಸ್ಥೆಗೆ ಸಲ್ಲಿಸಿದ ಸೇವೆ ಸ್ಮರಣೀಯ. ಅವರ ಆಗಲಿಕೆಯಿಂದ ಸಿದ್ಧಗಂಗಾ ವಿದ್ಯಾಸಂಸ್ಥೆಗೆ ಅಪಾರ ನಷ್ಟವುಂಟಾಗಿದೆ. ಅವರ ಕುಟುಂಬ ವರ್ಗದವರಿಗೆ ಅವರ ಆಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಹಾಗೂ ಅವರ ಆತ್ಮಕ್ಕೆ ಚಿರಶಾಂತಿಯನ್ನು ದಯಾಮಯನಾದ ಶ್ರೀ ಸಿದ್ಧಲಿಂಗೇಶ್ವರರು ಕರುಣಿಸಲೆಂದು ಪ್ರಾರ್ಥಿಸುತ್ತಾ ''ಸಿದ್ಧಗಂಗಾ'' ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

# ಸಮಾಜ ಸುಧಾರಣೆಯಲ್ಲಿ ವಚನಗಳ ಮಹತ್ವ

– ಪ್ರಭಾಕರ ನಾಯಕ
ಆಂಗ್ಲ ಉಪನ್ಯಾಸಕರು,
ಎಸ್.ಟಿ.ಜಿ. ಪದವಿಪೂರ್ವ ಕಾಲೇಜು, ಚಿಕ್ಕಮಗಳೂರು.

ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯಕ್ಕೆ ವಿಶಿಷ್ಟ ಸ್ಥಾನವಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಮತ್ತು ಕನ್ನಡ ಪುಸ್ತಕ ಪ್ರಾಧಿಕಾರದವರು ಬೇರೆ ಬೇರೆ ವಚನಕಾರರ ಸಾವಿರಾರು ವಚನಗಳನ್ನು ಸಂಗ್ರಹಿಸಿ, ಗ್ರಂಥಗಳ ರೂಪದಲ್ಲಿ ಪ್ರಕಟಿಸಿರುವುದು ಸುತ್ತ್ಯಾರ್ಹ ಕಾಯಕವಾಗಿವೆ. ೧೨ನೆಯ ಶತಮಾನ, ವಚನ ಸಾಹಿತ್ಯ ರಚನೆಗೆ ಮಹತ್ವಕೊಟ್ಟಷ್ಟು, ಹಿಂದಿನ ಮತ್ತು ನಂತರದ ಶತಮಾನಗಳಲ್ಲಿ ಕಂಡುಬಂದಿಲ್ಲವೆಂದೇ ಹೇಳಬಹುದು – ವಚನಗಳ ಸೃಜನಶೀಲತೆಯಲ್ಲಿ ವಚನಕಾರರ ಸ್ಫೂರ್ತಿ ಮತ್ತು ಸ್ಥಿತಿಗಳ ಅವಲೋಕನವು ಮುಖ್ಯವಾಗಿದೆ, ಜೊತೆಗೆ ಅವರು ಚಿಂತಿಸಿದ ಸಾಮಾಜಿಕ ವಿಷಯಗಳು ಪ್ರಾಮುಖ್ಯತೆ ಪಡೆದಿವೆ. ರಾಜಕೀಯ, ಸಾಮಾಜಿಕ, ವೈಚಾರಿಕ, ಆರ್ಥಿಕ, ವಿಷಯಗಳು – ಸಕಲ ಪ್ರಾಪಂಚಿಕ ಸಂಗತಿಗಳು – ಧಾರ್ಮಿಕ ಹಿನ್ನಲೆಯಲ್ಲಿ ಅಭಿವ್ಯಕ್ತಗೊಂಡದ್ದು ವಿಶೇಷವಾಗಿದೆ.

ವಚನ ಸಾಹಿತ್ಯಕ್ಕೆ ಒಂದು ಸಂಪ್ರದಾಯವಿರುವಂತೆ ಒಂದು ಪರಂಪರೆಯೇ ಬೆಳೆದು ಬಂದಿದೆ – ವಚನಕಾರನಿಗೆ ತನ್ನ ಸುತ್ತಣ ಸಮಾಜವೇ ಸ್ಫೂರ್ತಿಯನ್ನು ನೀಡಿದರೆ, ಆತ ಪಡೆದ ಧ್ಯಾನಸ್ಥ ಮನವೇ ಸಮಾಜವನ್ನು ಕಂಡು ಆಡಿದ ಅಭಿವ್ಯಕ್ತಿಯಾಗಿದೆ. ಬದ್ಧ ಬದುಕಾಗಿದ್ದರೂ ಮುಕ್ತ ಮನಸ್ಸಿನಿಂದ ಹಾಡಿದ ಗೀತೆಯಾಗಿದೆ. ಅದಕ್ಕೆ ಬಸವಣ್ಣ ಒಂದೆಡೆ ಹೇಳಿರುವುದು 'ಅನು ಒಲಿದಂತೆ ಹಾಡುವೆನು' – ಇಲ್ಲಿ ವ್ಯಷ್ಟಿಯಿಂದ ಸಮಷ್ಟಿಯೆಡೆಗೆ ಸಾಗುವ ಗುಣಗಳು ಕಂಡುಬರುತ್ತವೆ. ಕವಿ ರವೀಂದ್ರರೂ ಕೂಡ ಇದೇ ಹಿನ್ನಲೆಯಲ್ಲಿ ಗೀತಾಂಜಲಿಯಲ್ಲಿ ಹಾಡಿರುವುದು ಕಂಡು ಬರುತ್ತದೆ. ಕವನಗಳು ಅನುಭವದ ನಿವೇದನೆಯಾದರೆ, ವಚನಗಳು ಅನುಭಾವದ ನಿವೇದನೆ. ಸಂಸ್ಕಾರಗೊಂಡ ಅನುಭವ ಅನುಭಾವವಾಗಲು ಸಾಧ್ಯ. ವಚನಕಾರನ ಸಂಸ್ಕಾರಗೊಂಡ ಮನದಿಂದ ಸಮಾಜದ ಅವಲೋಕನ ಮಾಡಿದಾಗ, ಮೂಡಿಬಂದ ಅಭಿವ್ಯಕ್ತಿಯೇ ವಚನ. ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ, ನಯನದಲಿ ನಿಮ್ಮ ಮೂರ್ತಿ ತುಂಬಿ, ವಚನದಲ್ಲಿ ನಾಮಾಮೃತ ತುಂಬಿ ಎಂಬ ವಚನ ಸಾಕ್ಷಿಯಾಗಿದೆ. ಜಗವ ಸುತ್ತಿರುವುದು ನಿನ್ನಯ ಮಾಯೆ, ನಿನ್ನ ಸುತ್ತಿರುವುದು ಎನ್ನ ಮನ ನೋಡಾ ಎನ್ನುವ ವಚನದಲ್ಲಿಯೂ ಮೇಲಿನ ಮಾತಿಗೆ ಪುಷ್ಟಿ ದೊರೆಯುತ್ತದೆ.

'ಕಾಯಕವೆ ಕೈಲಾಸ'ವೆಂಬ ಮಾತು ದುಡಿಮೆಯನ್ನು ಕುರಿತು ಹೇಳಿರುವುದಾಗಿದೆ – ನಡೆಯು ನುಡಿಗೆ ಅನುಸಂಧಾನಗೊಳ್ಳುವುದು ಮುಖ್ಯವಾಗಿದೆ, ಅನುಭಾವದ ಸ್ಥಿತಿ, ಅಂತರಂಗದ ಮಾತನ್ನು ಬಹಿರಂಗಗೊಳಿಸಲು ಅಭಿವ್ಯಕ್ತಿಗೆ ಶರಣಾಗಲು ಹುಟ್ಟಿಬಂದ ಸಾಹಿತ್ಯವೇ ವಚನ ಸಾಹಿತ್ಯ.

ಸಾಹಿತ್ಯ ಕೃತಿಯನ್ನು ಓದುವುದರಿಂದ ಬರೆಯುವುದರಿಂದ, ಹೇಳುವುದರಿಂದ, ಕೇಳುವುದರಿಂದ, ತಿಳಿಯುವುದು, ಭಾಷಾ ಕಲಿಕೆಯ ನಾಲ್ಕು ಕೌಶಲ್ಯಗಳಿಂದ ಅರಿಯುವುದು ಸಾಧ್ಯವಾಗುತ್ತದೆ ಎಂದರೆ, ವಚನಗಳ ಸೃಜನಶೀಲತೆಯಲ್ಲಿ ಸ್ಥಿತಿ ಬಿಂಬವಿರುವಂತೆ ಗತಿಬಿಂಬವೂ ಸ್ಪಷ್ಟತೆಯಿಂದ ಪಡಿಮೂಡಿದೆ, ಬದುಕಿನಲ್ಲಿ ನೋಡುವುದು ಎಷ್ಟು ಮುಖ್ಯವೊ, ತೋರಿಸುವುದೂ ಅಷ್ಟೇ ಮುಖ್ಯ. ಆದ್ದರಿಂದಲೇ ವಚನ ಸಾಹಿತ್ಯದ ಆಶಯ, ಸಮಾಜವನ್ನು ನೋಡುವುದು ಅನುಭಾವಿಕ ಸ್ಥಿತಿಯಲ್ಲಿ ಸಮಾಜ ಸುಧಾರಣೆಯನ್ನು ಮಾಡಲು ಪ್ರಯತ್ನಿಸುವುದಾಗಿದೆ. ಸಾಹಿತ್ಯದ ಅಧ್ಯಯನ ಸಂಸ್ಕೃತಿಯ ಅಧ್ಯಯನವಾಗುತ್ತಿರುವಾಗ, ವಚನಗಳಲ್ಲಿನ ಭಾಷೆಯೂ ವೈಶಿಷ್ಟಪೂರ್ಣವಾದದ್ದು, ಅವುಗಳ ಅವಲೋಕನದಲ್ಲಿ ಕಂಡುಬರುತ್ತದೆ.

★

> ಪರೋಪಕಾರ ಮಾಡದ ಮನುಷ್ಯನ ಬಾಳಿಗೆ ಧಿಕ್ಕಾರ! ಪಶುಗಳು ಜೀವಿಸಲಿ! ಸತ್ತ ಮೇಲೆ ಸಹಾ ಅವುಗಳ ಚರ್ಮವೂ ಉಪಯೋಗಕ್ಕೆ ಬರುತ್ತದೆ.
>
> – ಸುಭಾಷಿತರತ್ನ ಸಮುಚ್ಚಯ







# ಶ್ರೀ ಸಿದ್ಧೇಶ್ವರ ಪುರಾಣ

– ಕೋ.ರಂ. ಬಸವರಾಜು
ಪ್ರಾಧ್ಯಾಪಕರು,
ಶ್ರೀ ಸಿದ್ದಗಂಗಾ ಸಂಸ್ಕೃತ ಕಾಲೇಜು,
ಶ್ರೀ ಸಿದ್ದಗಂಗಾ ಕ್ಷೇತ್ರ

ಭಾಗ-೧೩

ಅತ್ತ ಅಪಾರಮಹಿಮರಾದ ಶ್ರೀಸಿದ್ಧಲಿಂಗೇಶ್ವರರು ಹೇರೂರಿನಲ್ಲಿ ಭಕ್ತರ ಬಿನ್ನಹ ಬಿಡುಗಡೆಯನ್ನು ಪೂರೈಸುತ್ತಾ ಸಂಕಥಾಗೋಷ್ಠಿಗಳಲ್ಲಿ ಒಪ್ಪಿರುತ್ತಾರೆ. ಇತ್ತ ಪುಲಿಯೂರಿನಲ್ಲಿ (ಹುಲಿಯೂರು ದುರ್ಗದಲ್ಲಿ) 'ವಿಷಯಜ್ವರ ಕಾಣಿಸಿಕೊಂಡು ಜನರೆಲ್ಲಾ ರೋಗಗ್ರಸ್ತರಾಗಿ ಬಳಲುತ್ತಾರೆ. ಆಗ ಆವೂರಿನ ಹಿರಿಯರೂ ಭಕ್ತರೂ ಸೇರಿ 'ಶಿವಯೋಗಿಗಳನ್ನು ನಮ್ಮೂರಿಗೆ ಬಿಜ್ಜಯಂಗೈಸುವುದರಿಂದ ಕಷ್ಟನಿವಾರಣೆಯಾಗುವುದೆಂದು' ತೀರ್ಮಾನಿಸಿ ಬಿನ್ನಹ ಮಾಡಲು ಹೇರೂರಿಗೆ ಬರುತ್ತಾರೆ. ಅವರ ಪ್ರಾರ್ಥನೆಗೆ ಮನಸೋತು ಶ್ರೀ ಸಿದ್ಧಲಿಂಗೇಶ್ವರರು ಬೋಳಬಸವಾದಿ ಶಿಷ್ಯವೃಂದದೊಡನೆ ಪುಲಿಯೂರಿನತ್ತ ತಮ್ಮ ದಿವ್ಯಪಾದವನ್ನು ಬೆಳೆಸುತ್ತಾರೆ.

ದಾರಿಮಧ್ಯೆ ಸೂರ್ಯಚಂದ್ರರ ಕಿರಣಗಳಾಗಲಿ ಮಿಂಚಿನ ಬೆಳಕಾಗಲಿ ಪ್ರವೇಶಿಸಲಾಗದಷ್ಟು ದಟ್ಟಡವಿ ಸಿಗುತ್ತದೆ. ಅದು ನಾನಾತರುಲತಾಗುಲ್ಮಗಳಿಂದಲೂ ನಾನಾ ಖಗಮೃಗ ಸಂಕಲದಿಂದಲೂ ತುಂಬಿ ಅತಿಭಯಂಕರವಾಗಿರುತ್ತದೆ. ಇಂಥ ಅಡವಿಯಲ್ಲಿ ಬರುತ್ತಿರುವ ಈ ಸಮಯವೇ ಈ ಶಿವಯೋಗಿಯ ವೈರಾಗ್ಯ. ಧೈರ್ಯ, ಅಕ್ರೋಧ, ಪರಮಶಾಂತಿ, ನಿರಾಶೆ ಮುಂತಾದವುಗಳನ್ನು ಪರೀಕ್ಷಿಸಲು ಸಕಾಲವೆಂದು ಭಾವಿಸಿದ ಶಿವನು ಕಿರಾತವೇಷಧಾರಿಯಾಗಿ ಶಿವೆಯೊಡನೆ ಅಲ್ಲಿಗೆ ಬರುತ್ತಾರೆ. ಹಿಂದೆ ಅರ್ಜುನನನ್ನು ಪರೀಕ್ಷಿಸಲು ಶಬರವೇಷಧಾರಿಯಾಗಿ ಬಂದಂತೆ ಬೇಟೆಯಾಡುತ್ತಾ ಸಿದ್ಧಲಿಂಗೇಶ್ವರರ ಬಳಿಗೆ ಬಂದು 'ಎಲೆಲೆ ತಾಪಸಾ! ಕೊಡುಕೊಡು ಸುಲಿಗೆಯನು' (ಏನಿದೆ ಅದೆಲ್ಲವನ್ನೂ ಕೊಡು) ಎಂದು ಅಬ್ಬರಿಸುತ್ತಾನೆ, ಜಡಿದು ನುಡಿಯುತ್ತಾನೆ. ಆಗ ಶಿವಯೋಗಿಗಳು ಪರಮಶಾಂತಿಯಿಂದ ತಮ್ಮ ಮೇಲುತ್ತರೀಯವನ್ನು (ಮೇಲೆ ಹೊದ್ದುಕೊಂಡಿದ್ದ ಶಾಲನ್ನೂ) 'ಮಗನೇ! ಪರಮಸುಖಿಯಾಗು ಹಿಡಿ' ಎಂದು ಹರಸಿಕೊಡುತ್ತಾರೆ. ತಮ್ಮ ಗುರುಗಳ ಈ ಕ್ರಿಯಾವರ್ತನೆಯನ್ನು ಕಂಡ ಭೋಳಬಸವಾದಿ ಶಿಷ್ಯರೂ ತಂತಮ್ಮ ಮೇಲಂಗಿ ವಸ್ತ್ರಂಥೆ ಮೊದಲಾದವುಗಳನ್ನು 'ಹಿಡಿ ಹಿಡಿ' ಎಂದು ತೆಗೆದುಕೊಟ್ಟು ಗುರುವನ್ನು ಅನುವರ್ತಿಸಿದರು. ಆಗ ಆ ಕಪಟಕಿರಾತನಾದ ಶಿವನು ವರಗುರುವಿನ ಹಾಗೂ ಶ್ರೇಷ್ಠ ಶಿಷ್ಯರ ಸದ್ಗುಣಗಳನ್ನು ಪರಮಶಾಂತಿಯನ್ನು ಘನವೈರಾಗ್ಯವನ್ನು ಹಾಗೂ ಆಶಾವಿಗಳಿತೆಯನ್ನು ಕಂಡು ಬೆರಗಾಗಿ 'ಈ ಸುಲಿಗೆಯನ್ನು ಒಲ್ಲೆನೊಲ್ಲೆನೆಂದು' ಅದೃಶ್ಯನಾಗುತ್ತಾನೆ. ಅದನ್ನರಿತ ಶಿವಯೋಗಿಗಳು ನಮ್ಮನ್ನು ಪರೀಕ್ಷಿಸಲು ಬಂದವನು ಶಿವನೆಂಬುದನ್ನು ಶಿಷ್ಯರಿಗೆ ಅರುಹುತ್ತಾರೆ. ಮತ್ತು ಹಿಂದೆ ಸೌಂದರನಂಬಿ ಓಹಿಲಯ್ಯನ ಬಳಿಗೆ ಶಬರರೂಪದಿಂದ ಹೋಗಿ ಪರೀಕ್ಷಿಸಿದ ದೃಷ್ಟಾಂತಗಳನ್ನು ತಿಳಿಸುತ್ತಾರೆ.

ನಂತರ ಮುಂದೆ ಪಯಣಬೆಳಸಿ ಪುಲಿಯೂರನ್ನು ಪ್ರವೇಶಿಸುತ್ತಾರೆ. ಆ ವಿರತಾಗ್ರಗಣ್ಯ ಮಹಾಶಿವಯೋಗಿ ಪುರಪ್ರವೇಶ ಮಾಡಿದ ಕ್ಷಣಾರ್ಧದಲ್ಲಿಯೇ ಅಂಟಿದ ವಿಷಮಜ್ವರ ಮಾಯವಾಗುತ್ತದೆ. ಮೆಟ್ಟಿದ ಆ ಧರೆ ಪರಮಪಾವನಗಾಗುತ್ತದೆ. ಆಗ ಆ ಪುಲಿಯೂರ ಜನ 'ಗುರುವೆ! ಮಹಾಗುರುವೆ! ಪರಮಪಾವನಮೂರ್ತಿ! ನಿಮ್ಮಿಂದ ಬದುಕಿದೆವು. ತಿಲ್ಲಿವಲ್ಲಿ ನಾಚಿಯರ ಕಂಡು ವಾಗೀಶನೆಂಬುವನ ಜ್ವರವು ಬಿಟ್ಟೋಡುವಂತೆ ನಿಮ್ಮನ್ನು ಕಂಡೊಡನೆ ನಮಗೆ ಅಂಟಿದ್ದ ವಿಷಮಜ್ವರವೆಲ್ಲವೂ ಬಿಟ್ಟುಹೋಯ್ತು. ಹರುಷ ಉಲ್ಲಾಸಗಳು ಮೂಡಿದವು. ನಿನ್ನ ಘನ ಮಹಿಮೆ ಅಪಾರ ಶಿವನೆ!' ಮುಂತಾಗಿ ಉದ್ಗರಿಸುತ್ತಾ ಪಾದದ ಮೇಲೆ ಬಿದ್ದು ಹೊಗಳಿ ಕೊಂಡಾಡಿ ಸಂತೋಷದ ಶರಧಿಯೊಳಗೆ ತೇಲಾಡಿದರು. ಮತ್ತು 'ನಮ್ಮೂರಿನಲ್ಲಿಯೇ ನಮ್ಮಗಳ ಭಕ್ತಿಕೈಂಕರ್ಯವನ್ನು ಸ್ವೀಕರಿಸಿ ಕೆಲವು ದಿನಗಳಾದರೂ ಇರೋಣವಾಗಲಿ' ಎಂದು ಬೇಡುತ್ತಾರೆ.

ಹೀಗೆ ಪುಲಿಯೂರಿನ ಪ್ರಾರ್ಥನೆಯಂತೆ ಅಲ್ಲಿ ಕೆಲವು ದಿನವಿರಲು ಒಂದು ದಿನ ಭಕ್ತರು ಹಾಗೂ ಶಿಷ್ಯ ಸಮೇತರಾಗಿ ಆ ವೂರಿನ ಪಕ್ಕದಲ್ಲಿಯೇ ಇರುವ ಹೇಮಾಚಲವೆಂಬ ಬೆಟ್ಟಕ್ಕೆ ಹೋಗುತ್ತಾರೆ. ಅಲ್ಲಿನ ಪ್ರಾಕೃತಿಕ ಸೊಬಗನ್ನು ಆಸ್ವಾದಿಸುತ್ತಾ ನಂತರ ಒಂದು ಬೆಟ್ಟದಾವರೆಯ ಮರದ ಕೆಳಗೆ ಕುಳಿತು ಪರಮಶಿವಾನುಭವಗೋಷ್ಠಿಯನ್ನು ಮಾಡುತ್ತಾರೆ. (ಯಾವಾಗಲೂ ಶಿವಯೋಗಿಗಳು ಬಯಲಲ್ಲೆ ಅಥವಾ ಪ್ರಕೃತಿಯ ಮಡಿಲಲ್ಲಿಯೇ ಬಯಲನರಸುವ ಶಿವಾನುಭವ ಗೋಷ್ಠಿಯನ್ನು ನಡೆಸುತ್ತಿದ್ದುದು.) ಆಗೊಂದು ವಿಚಿತ್ರವಾದ ಘಟನೆ ಜರುಗುತ್ತದೆ. ಕಪ್ಪುತಲೆ, ಬಿಳಿಹೊಟ್ಟೆ, ಹೊಂಬಣ್ಣದಬೆನ್ನು, ಹಸಿರುಹುಬ್ಬು, ವಜ್ರದಪಾದವುಳ್ಳ ವಿಚಿತ್ರಮರ್ಕಟವೊಂದು ಕೈಲಿ ಬಿಳಿಸೀರೆಯೊಂದನ್ನು ಹಿಡಿದು ಎಲ್ಲಿಂದಲೋ ಬಂದು ಶ್ರೀಸಿದ್ಧಲಿಂಗೇಶ್ವರರ ಪಾದಕ್ಕೆರಗಿ, ತಾನು ತಂದ ಸೀರೆಯನ್ನು ಭಕ್ತಿಯಿಂದ ಅರ್ಪಿಸಿ ನುತಿಸಿ ದಿವ್ಯದೇಹವನ್ನು ಪಡೆದು ಕೂಡಲೆ ವಿಮಾನವೇರಿ ಕೈಲಾಸಗಿರಿಯತ್ತ ಹೋಯಿತು. ಇದೆಲ್ಲವನ್ನೂ ಶಿಷ್ಯರು ಅಚ್ಚರಿಯಿಂದ ನೋಡುತ್ತಲೇ ಇದ್ದರು. ಒಬ್ಬರಿಗೂ ಅರ್ಥವಾಗಲಿಲ್ಲ, ಆಗ ಬೋಳಬಸವೇಶ ಧೈರ್ಯವಾಗಿ ಗುರುಗಳನ್ನೇ

ಕೇಳುತ್ತಾನೆ. 'ಗುರುವೆ! ಶರಣಪ್ರೇಮಿಯೆ! ಈತನಾರು! ಈತನ ಪೂರ್ವವೃತ್ತಾಂತವೇನು? ಸಾದ್ಯಂತವಾಗಿ ತಿಳಿಸುವ ಕೃಪೆ ಮಾಡಬೇಕು' ಎಂಬುದಾಗಿ. ಆಗ ಆತನ ವೃತ್ತಾಂತವನ್ನು ಶಿವಯೋಗಿಗಳು ತಿಳಿಸಲುಪಕ್ರಮಿಸುತ್ತಾರೆ. ಪೂರ್ವದಲ್ಲಿ ಭದ್ರಾಂಗ-ಕೌಶಲ್ಯನೆಂಬ ಗುರುಶಿಷ್ಯರಿಬ್ಬರಿದ್ದರು. ಒಮ್ಮೆ ವಾಯುವಿಹಾರಕ್ಕೆಂದು ಹೋಗುತ್ತಿರುವಾಗ ಒಂದು ಕೋತಿ ಮರಿಯು ಗುರುವಿನ ಭುಜದ ಮೇಲೆ ಆಡರಿ ಕುಳಿತುಕೊಳ್ಳುತ್ತದೆ. ಅದನ್ನು ಕಂಡ ಶಿಷ್ಯ ಎತ್ತಿ ನೆಲದ ಮೇಲೆ ನಿಧಾನವಾಗಿ ಎಸೆಯುತ್ತಾನೆ. ಆಗದರ ಕಾಲುಗಳು ಮುರಿದುಹೋಗಿ ಸ್ವಲ್ಪಕಾಲದಲ್ಲಿಯೇ ಸತ್ತು ಹೋಗುತ್ತದೆ. ಅದನ್ನು ನೋಡಿದ ಕರುಣಾಮೂರ್ತಿಯಾದ ಗುರುವಿಗೆ ಶಿಷ್ಯನ ಮೇಲೆ ಕೋಪಬಂದು – 'ಎಲೈ ನಿನಗೂ ಈ ಪರಿಯ ಜನ್ಮವಪ್ಪುದು ತಪ್ಪದು' ಎಂದು ಶಪಿಸುತ್ತಾರೆ. ಆಗ ಶಿಷ್ಯನು "ನಾನು ಮಾಡಿದ ತಪ್ಪಾದರೂ ಏನು ಗುರುವೆ? ನಿಮ್ಮ ಮೈಮೇಲೆ ಹತ್ತಿದ ಆ ಹುಳುವನ್ನು ಮೆಲ್ಲಗೆ ತೆಗೆದು ಹಾಕಿದೆನಷ್ಟೆ, ಆದರ ಆಯುಸ್ಸು ಮೀರಿ ಕಾಲನ ವಶವಾಯಿತು. ಇದು ಆದರ ವಿಧಿ. ಆ ವಿಧಿಗಾಗಿ ನನಗೆ ಶಾಪವೆ? ಈ ಶಾಪದಿಂದ ವಿಮೋಚನೆಯಿಲ್ಲವೆ? ನಿಮ್ಮನ್ನಗಲಿ ಹೇಗಿರಲಿ? ಎಂದು ವಿಮುಕ್ತಿ ಸಿಗುವುದು?" ಎಂದು ಪರಿಪರಿಯಾಗಿ ಬೇಡುತ್ತಾನೆ. ಆಗ ಆ ಭದ್ರಾಂಗ ಗುರುವು "ನೀನು ಪುಲಿಯೂರ ಹೇಮಾಚಲದಲ್ಲಿ ಮರ್ಕಟನಾಗಿ ಹುಟ್ಟಿ ಅಲ್ಲಿಯೇ ವಾಸವಾಗಿದ್ದು ಮಂಗಳವಾದ ಶುಭ್ರವಾದ ಸೀರೆಯನ್ನು ಸುಂದರವಾಗಿ ನೆಯ್ದು ಕಾಯ್ದುಕೊಂಡಿರು. ಶಿವಯೋಗಿ ಪುಂಗಶ್ರೀ ಸಿದ್ಧಲಿಂಗ ಶಿವಯೋಗೀಶ್ವರರು ಮುಂದೆ ಅಲ್ಲಿಗೆ ಬರುವರು. ಆಗವರ ಪಾದಕ್ಕೆ ಸೀರೆಯನ್ನು ಭಕ್ತಿಯಿಂದ ಅರ್ಪಿಸು ನಿನ್ನ ಶಾಪವಿಮೋಚನೆಯಾಗುವುದು" ಎಂದು ಹೇಳಿದರು. ಆ ಗುರುವಾಕ್ಯದಂತೆ ಸೀರೆಯನ್ನು ನೆಯ್ದು ನಮಗೆ ಈಗರ್ಪಿಸಿ ಶಾಪವಿಮೋಚನೆ ಪಡೆದು ಕೈವಲ್ಯಪಡೆದು ಕೈಲಾಸಕ್ಕೆ ಹೋದನು ಎಂಬುದಾಗಿ ಸಿದ್ಧಲಿಂಗೇಶ್ವರರು ಹೇಳುತ್ತಾರೆ. ಆಗ ಬೊಳಬಸವೇಶ್ವರರು 'ನಿಮ್ಮ ಕರುಣೆಯೊಂದಿದ್ದರೆ ಕೈವಲ್ಯ ಕೈಲಾಸ ಪಡೆಯುವುದೇನು ಆಶ್ಚರ್ಯವೆ? ಎಂದು ಸಹಶಿಷ್ಯರೊಂದಿಗೆ ನುತಿಸುತ್ತಾರೆ. ಮತ್ತಿದು ಬಸವಣ್ಣ ದೇವಯ್ಯ ಮಾದಯ್ಯರು ತಮ್ಮ ವನಿತೆಯರುಟ್ಟ ಸೀರೆಯನ್ನು ದಾನಮಾಡಿದುದಕ್ಕಿಂತಲೂ, ದಾಸಿಮಾರ್ಯನು ಜಂಗಮಕ್ಕೆ ದಾನಮಾಡಿದ ಸೀರೆಗಿಂತಲೂ ಮಿಗಿಲೆಂಬುದಾಗಿ ಭಾವಿಸುತ್ತಾರೆ.

ಹೀಗೆ ಆ ಹುಲಿಯೂರಿನಲ್ಲಿ ಭಿನ್ನಭಾವ ಭ್ರಮೆಗಳಡಗಿದ ವಿರತಶಿಷ್ಯರೊಡನೆ ಶ್ರೀ ಶಿವಯೋಗಿಗಳು ಕೆಲವು ಮಾಸಗಳು ಇರುತ್ತಿರಲಾಗಿ ವಸಂತಕಾಲಪ್ರಾಪ್ತವಾಗುತ್ತದೆ. ಆಗಾಪೂರ ಪೌರರೆಲ್ಲ ಸೇರಿ ವಸಂತೋತ್ಸವನಿಮಿತ್ತ ಸಿದ್ಧಲಿಂಗೇಶ್ವರರನ್ನು ಉದ್ಯಾನಕ್ಕೆ ಬಿಜ್ಜೈಂಗೈಸಿ ಶಿವಪೂಜರ ಆರೋಗಣೆ ಮಾಡಿಸಬೇಕೆಂಬುದಾಗಿ ಸಂಕಲ್ಪಿಸುತ್ತಾರೆ. ಅದರಂತೆ ಮಾವಿನಮರವೊಂದರ ತಣ್ಣನೆ ನೆರಳಲ್ಲಿ ಬಾಳೆಕಂಬಗಳನ್ನು ನೆಟ್ಟು, ಕೆಂಪುತಳಿರ ಮೇಲ್ಕಾವಣಿಯನಿಕ್ಕಿದ ಸುತ್ತಲೂ ಲಾಮಂಚದ ನೆರಕೆಕಟ್ಟಿದ ಮಂಟಪವನ್ನು ಸಿದ್ಧಗೊಳಿಸಿ, ನಾನಾ ಹೂಗಳಿಂದಲಂಕರಿಸಿ, ಕಸ್ತೂರಿಯೆಂಬ ಸಗಣೆಯಿಂದ ಕಾರಣೇ ಸಾರಣೆ ಮಾಡಿ ರಂಗದಲ್ಲಿಯನ್ನಿಕ್ಕಿ ಅಲಂಕಾರ ಗೈಯ್ಯುತ್ತಾರೆ. ನಂತರ ಶಿವಯೋಗಿಗಳನ್ನು ಶಿಷ್ಯರನ್ನೂ ಮಂಟಪದೊಳಗೆ ಬಿಜಯಂಗಿಸಿ, ಪೂಜಿಸಿ ಪರಿಪರಿಯ ಭಕ್ಷ್ಯಭೋಜ್ಯಲೇಹ್ಯಾದಿಗಳನ್ನೂ ಕೆಂದ ಎಳನೀರುಗಳನ್ನು ಲಿಂಗಾರ್ಪಿತವಗೈಸಿ ಆರೋಗಣೆಯನ್ನು ಭಕ್ತರು ಭಕ್ತಿಯಿಂದ ನೆರವೇರಿಸುತ್ತಾರೆ. ಹೀಗೆ ಅರ್ಚನ ಅರ್ಪಣ ಅನುಭಾವಗಳು ಮುಗಿದ ಮೇಲೆ ಪುರದೊಳಕ್ಕೆ ಬಿಜಯಂಗೈಸುತ್ತಾರೆ.

ಇತ್ತ ಆಪೂರಿನ ಹೆಣ್ಣುಮಗಳೊಬ್ಬಳು ತನ್ನ ಪತಿ ಯುದ್ಧಕ್ಕೆ ಹೋದವನು ರಣರಂಗದಲ್ಲಿ ಹೋರಾಡಿ ಸತ್ತನೆಂಬ ಸುದ್ದಿಯನ್ನು ಕೇಳಿ ಅದನ್ನು ನಿಶ್ಚಯಿಸಿಕೊಂಡು ಕಳೆಬರಬರುವ ಹೊತ್ತಿಗೆ ಸಹಗಮನಕ್ಕೆ ಸಿದ್ಧಳಾಗಿ ಅರಿಶಿನದ ಸೀರೆಯುಟ್ಟು, ಆಭರಣಗಳನ್ನು ಧರಿಸಿ, ಮಂಡೆಯನ್ನು ಹೂವಿನಿಂದಲಂಕರಿಸಿಕೊಂಡು ವೀರವಾದ್ಯ ಸಮೇತ ಬೀದಿಯಲ್ಲಿ ಕುಣಿಯುತ್ತ ಜನಸಂದಣಿಯನ್ನು ಭೇದಿಸಿ ಬರುತ್ತಾಳೆ. ಆಗ ಎದುರಿಗೆ ಬರುತ್ತಿರುವ ಶಿವಯೋಗಿಗಳನ್ನು ಕಂಡು ಅವರ ಪಾದದ ಮೇಲೆ ಮೈಯಿಕ್ಕಿದಳು. ಆಗ ಶಿವಯೋಗಿಗಳು ಅವಳ ಮೆಲೆ ಕಾರುಣ್ಯದೃಷ್ಟಿ ಬೀರಿ "ಏಳು ಮಗಳೆ! ಏಳು! ಬದುಕು, ಮುತ್ತೈದೆಯಾಗಿ ಬಾಳು" ಎಂದು ಹರಸಿಬಿಟ್ಟರು. ಆಗ ಆ ವನಿತೆ 'ಸಹಗಮನಕ್ಕೆ ಸಿದ್ಧಳಾದ ನನ್ನನ್ನು ಮುತ್ತೈದೆಯಾಗೆಂದು ಹರಿಸಿದಿರಿ. ಹರಸುವುದು ನಿಮ್ಮಕಾರುಣ್ಯ" ಎನ್ನುತ್ತಾಳೆ. ಅದಕ್ಕೆ ಪರುಷದ ಮೇರುವಾದ ಶಿವಯೋಗಿಗಳು "ಹೋಗು ಮಗಳೆ! ಮನೆಗೆ ಹೋಗು. ಇನ್ನು ಮೂರುದಿವಸದೊಳಗಾಗಿ ನಿನ್ನ ಗಂಡ ಮರಳಿ ಮನೆಗೆ ಬರುತ್ತಾನೆ" ಎಂದು ಹರಸಿ ಕಳುಹಿಸಿಕೊಡುತ್ತಾರೆ. ಆ ಪರಮಗುರುವಾಕ್ಯದಲ್ಲಿ ನಂಬಿಕೆಯಿಟ್ಟು ಆ ಸತಿಯು ತನ್ನ ಗಂಡನ ನಿರೀಕ್ಷೆಯಲ್ಲಿ ತವಕದಿಂದಿತ್ತಾಳೆ. ಮೂರುದಿವಸಗಳಲ್ಲಿ ಆಕೆಯ ಗಂಡನು ನೂತನ ವಸ್ತ್ರಭೂಷಣಾದಿಗಳನ್ನು ಹೆಂಡತಿಗಾಗಿ ಕೊಂಡು ಸಂತೋಷದಿಂದ ಮನೆಗೆ ಬರುತ್ತಾನೆ. ಹೆಂಡತಿಗಿತ್ತು ಸುಖಪಡಿಸುತ್ತಾನೆ. ಈ ಸುದ್ದಿಯನ್ನು ಕೇಳಿ ನೋಡಿ ಅಖಿಲರೂ ನೆರೆದು ಗುರುವಿನ ಮಹಿಮೆಯನ್ನು ಕೊಂಡಾಡಿ ಪರಮಹರ್ಷಾಬ್ಧಿಯಲ್ಲಿ ಮುಳುಗುತ್ತಾರೆ. ಹಿಂದೆ ವಿಮಾನದೊಳೊಯ್ವನನ್ನು ಬಸವಣ್ಣನು ಬದುಕಿಸಿದಂತೆ, ಸತ್ತ ಮಗಳನ್ನು ಚವುಂಡರಾಯ ಬದುಕಿಸಿದಂತೆ, ಹಾವು ಕಡಿದು ಸತ್ತವನಿಗೆ ವೇಮನಾರಾಧ್ಯ ಹರಣವಿತ್ತಂತೆ ಆಯ್ತು ನಮ್ಮ ಗುರುಗಳು ಆಶೀರ್ವಾದ ಮಾಡಿದುದು – ಮುಂತಾದ ದೃಷ್ಟಾಂತಗಳನ್ನು ಸ್ಮರಣೆಗೆ ತಂದುಕೊಳ್ಳುತ್ತಾರೆ. ಇಲ್ಲಿಗೆ ೧೨ನೇ ಸಂಧಿಯ ಕಥೆಯು ಮುಗಿಯುತ್ತದೆ.

ವಿಶೇಷ ವಿಚಾರ : ಶ್ರೀ ಸಿದ್ಧಲಿಂಗೇಶ್ವರರು ತನ್ನ ಮೈಮೇಲಿನ ಉತ್ತರೀಯವನ್ನು ಕಿರಾತನಿಗೆ ಕೊಟ್ಟಂತೆ ಈ ಪರಂಪರೆಯಲ್ಲಿ ಬಂದ ಶ್ರೀ ಕ್ಷೇತ್ರದ ಅಧಿಪತಿಗಳೂ ತಮ್ಮ ಮೈಮೇಲಿನ ಉತ್ತರೀಯವನ್ನು ಕಾರುಣ್ಯಪಾತ್ರರಿಗೆ ಕೊಡುವ ಸಂಪ್ರದಾಯವನ್ನು ಇಂದಿಗೂ ಕಾಣಬಹುದಾಗಿದೆ.

★





## ಬದುಕು

– ಡಾ. ಎ. ಎಸ್. ಮಾಳಿ
ಹಾರೋಗೇರಿ, ಬೆಳಗಾವಿ ಜಿಲ್ಲೆ.

ಬದುಕು ಅಮೂಲ್ಯ. ಬದುಕಿಗೆ ಅರ್ಥ ತುಂಬುವುದೇ ಮಾನವ ಜೀವನದ ಉದ್ದೇಶ. 'ಬದುಕು' ಪದದ ನಿಷ್ಪತ್ತಿ ಕೂಡ ಬಲು ರೋಚಕ. ಬದುಕಿನ ಮೂಲ 'ಬರ್ದುಂತು'. ಬರ್ದುಂತು, ಬರ್ದುಂತು ಬದುಕು.

'ಬರ್ದು' ಎಂದರೆ ಸಾವು. ವಾಸ್ತವದಲ್ಲಿ ಬದುಕು ಸಾವಿನಲ್ಲಿ ಕೊನೆಗೊಂಡರೆ; ಭಾಷೆಯಲ್ಲಿ ಮಾತ್ರ ಸಾವಿನೊಂದಿಗೆ ಆರಂಭ ಗೊಳ್ಳುವುದು. ಆಶ್ಚರ್ಯ. 'ಸೊನ್ನೆ'ಯಿಂದ 'ಶೂನ್ಯ'ದತ್ತ ಚಲಿಸುವ ಈ ಚಲನೆಯನ್ನೇ 'ಜೀವನ', 'ಬಾಳು', 'ಬದುಕು' ಎಂದು ಕರೆಯು ವುದು ರೂಢಿ. ಬದುಕು ನಾವು ಅರ್ಜಿಸುವ ನಿಜವಾದ ಸಂಪತ್ತು. ಈ ಸಂಪತ್ತಿನ ಬೆಲೆ ಕಾಲವನ್ನು ಅವಲಂಬಿಸಿಲ್ಲ; ನಡತೆಯನ್ನು ಅವಲಂಬಿಸಿದೆ. ಬದುಕು ಇರುವುದು ಬಾಳುವುದಕ್ಕಲ್ಲ' ಆಳುವುದಕ್ಕೆ. ಕೇವಲ ಆಯುಷ್ಯ ಕಳೆಯುವುದು ಬಾಳಲ್ಲ; ಬದುಕಲ್ಲ. "ಜೀವ ಜೀವದಿಂ ಉದ್ದೀಪನವಾದುದೇ ನಿಕೃಷ್ಟ; ಆತನನ್ನು 'ನಡೆವೆಣ, ನುಡಿವೆಣ, ಬಾಳುವೆಣ, ಬೀಳುವೆಣ'ವೆಂದು ಬಸವಣ್ಣನವರು ಛೇಡಿಸುತ್ತಾರೆ. ಒಂದನಾಡ ಹೋಗಿ ಒಂಬತ್ತ ನಾಡುವ ಡಂಭಕರು' ಲೋಕ ಕಂಟಕರು.

ಶರಣರಿಗೆ ಮರ್ತ್ಯವೇ ಮಹಾಮನೆ, ಮರಣವೇ ಮಹಾನವಮಿ. ಬದುಕಿನಲ್ಲಿ ಸಾರ್ಥಕ ಭಾವ ಮೂಡಿದಾಗ ಸಾವು ವಿದಾಯದ ಹಬ್ಬವಾಗುವುದು. 'ಸಾವಿರವರ್ಷ ಬದುಕಿದರೂ ಸಾವು ತಪ್ಪಿದ್ದಲ್ಲ' ಎಂಬ ಸತ್ಯ ಎಲ್ಲರಿಗೂ ವೇದ್ಯ. ಇರುವಷ್ಟು ದಿನ ಲೇಸೆನಿಕೊಂಡು ಬದುಕಬೇಕೆಂಬುದು ಬಸವಣ್ಣನವರ ಅಭೀಷ್ಟೆ ಲೇಸೆನಿಸಿಕೊಂಡು ಐದು ದಿನ, ಇಲ್ಲವೇ ಒಂದೇ ದಿನ ಬದುಕಿದರೂ ಸಾಕು.

ವ್ಯಕ್ತಿತ್ವ ನಿರ್ಮಾಣದ ಬಸವಣ್ಣನವರ ಚಿಂತನೆ ವ್ಯಷ್ಟಿ ಹಿತದಿಂದ ಸಮಷ್ಟಿ ಸುಖದತ್ತ ಪ್ರವಹಿಸುತ್ತದೆ. ಪರಕ್ಕಿಂತ 'ಇಹ' ಮಿಗಿಲು, 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು; ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು'. ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟ. ನಡೆ-ನುಡಿಗಳ ಸಮನ್ವಯವೇ ಜೀವನ ಸಿದ್ಧಾಂತ. 'ಮಾತಿನಂತೆ ಮನವಿಲ್ಲದವರು ಜಾತಿ ಡಂಭರು' 'ಅಂತರಂಗ ಅಶುದ್ಧ ಬಹಿರಂಗ ಮಾತ್ರ ಶುದ್ಧವಿದ್ದರೆ' ಹೆಂಡದ ಮಡಿಕೆಯನ್ನು ಹೊರಗೆ ತೊಳೆದಂತೆ. ಮನಕ್ಕೆ ಮನ ಸಾಕ್ಷಿಯಾಗಬೇಕು. ಕೆಲಕ್ಕೆ ಶುದ್ಧನಾಗದೆ ಮನಕ್ಕೆ ಶುದ್ಧವಾಗುವುದು ಸಾಧ್ಯವಿಲ್ಲ. ಮನ, ಹೃದಯ, ವಚನ ಒಂದಾಗಬೇಕು. ಬದುಕು ಬಳ್ಳದ ಬಾಯಿಯಾಗ ಬೇಕು. ಆತ್ಮಸ್ತುತಿ, ಪರನಿಂದೆ ಸಲ್ಲದು. ಪರಧನ, ಪರಸ್ತ್ರೀ ವ್ಯಸನದಿಂದ ಮನ ಮುಕ್ತವಾಗಬೇಕು. ಅಸನ-ವ್ಯಸನಗಳಿಗೆ ದಾಸ ನಾಗುವುದೇ ಮಾನವತ್ವದ ಕೇಡು. ಈ ಕೇಡಿನಿಂದ ಪಾರಾದವನೇ ಶರಣ.

*ಕಾಮ ತೊರೆದಾತ, ಹೇಮವ ಜರೆದಾತ*
*ಭಾನುವಿನ ಉದಯಕ್ಕೆ ಒಳಗಾಗದಾತ ಶರಣ*

ಅಂತರಂಗ-ಬಹಿರಂಗ ಶುಚಿಗೆ ಹೆಸರಾದಾತನೇ ವೀರಮಾಹೇಶ್ವರ. ಆದರ್ಶ ಜೀವನದ ಸನ್ನಡತೆ ಇತಿಹಾಸದ ದಾರಿಗೆ ದೀಪವಾದೀತು. ಶರಣರ ವಚನಗಳು ಬಸವ ಮಾರ್ಗದ ಚಿರಂತನ ಹಣತೆಗಳು.

ಬದುಕಿಗೆ ದಕ್ಕುವ ಶಬ್ದ ಒಂದೇ – 'ಹೌದು' ಇಲ್ಲವೆ 'ಅಲ್ಲ'. ಜನ 'ಹೌದು' ಎಂದರೆ ಸಾರ್ಥಕ; 'ಇಲ್ಲ' ಎಂದರೆ ನಿರರ್ಥಕ. ವರ್ಷದಿಂದ ವರ್ಷಕ್ಕೆ ಬದುಕಿನ ಪರೀಕ್ಷೆಯಲ್ಲಿ ಉತ್ತೀರ್ಣತೆಯ ಪ್ರಮಾಣ ಇಳಿಮುಖಗೊಳ್ಳುತ್ತಿರುವುದೇ ಸಮಾಜದ ಅಧಃಪತನಕ್ಕೆ ಕಾರಣವಾಗಿದೆ. 'ಕಾಯಕದ ನಾಯಕ'ರ ಪ್ರಖ್ಯಾತಿಗಿಂತ ಆ ಕಾರ್ಯದ ಖಳನಾಯಕರ ಕುಖ್ಯಾತಿ ಹೆಚ್ಚು ವಿಜೃಂಭಿಸುತ್ತಿದೆ. ಹೆದ್ದಾರಿಗಳಿಗಿಂತ ಅಡ್ಡದಾರಿಗಳು ನಿಬಿಡವಾಗಿವೆ. 'ಕಾಫಿ'ಯಿಂದ 'ಮಾಫಿಯಾ'ದವರೆಗೆ ವ್ಯಾಪಿಸಿರುವ ಭ್ರಷ್ಟಾಚಾರದ ಬಲೆಯಲ್ಲಿ ಸಿಕ್ಕು ಹಾಕಿಕೊಳ್ಳದಿರುವವರೆ ವಿರಳವೆನಿಸುತ್ತದೆ. ಇಂಥ ಸಂದರ್ಭಗಳಲ್ಲಿ 'ಅಲ್ಲವೆನಿಸಿಕೊಂಬುದಕ್ಕಿಂತ ಈ ಕ್ಷಣವೇ ಸಾವುದೇ ಲೇಸು' ಎಂಬ ಅಕ್ಕನ ಮಾತು ನೆನಪಾಗುವುದು. ಆತ್ಮ ಕಲ್ಯಾಣದೊಂದಿಗೆ ಲೋಕ ಕಲ್ಯಾಣ ಸಾಧಿಸುವ ಛಲ ನಮ್ಮಲ್ಲಿ ಮೊಳೆಯಬೇಕಾಗಿದೆ. ಸ್ವಾರ್ಥ ತ್ಯಾಗದಿಂದಲೇ ಪರಮಾರ್ಥ ಸಿದ್ಧಿ. ಇಲ್ಲದಿದ್ದರೆ ಅಕ್ಕ ಹೇಳುವ ಹಾಗೆ 'ಜಾಲಗಾರನ ದುಃಖ'ದಂತೆ ನಮ್ಮ ಬಾಳು ನಗೆಗೇಡು. ಓದು-ಬರಹ ಅರಿಯದ, ಬಲ್ಲಿದರೆಂದೆನಿಸದೆ ಬದುಕಿದ ಜನಪದರು ಬದುಕಿನ ಅರ್ಥ ಗ್ರಹಿಸಿದ ರೀತಿ ಮನಸೆಳೆಯುತ್ತದೆ :

*ಲೋಕದಾಗಿರುವತನಕ ಬೇಕಾಗಿ ಇರಬೇಕ*
*ಸಾಕಾಗಿ ಶಿವನ ಸದರಿಸಗ । ಹೋಗಾಗ*
*ಲೋಕವೇ ಬಂದೀತು ಕಳುಹಾಕ.*

ಧನ್ಯತೆಯ ವಿದಾಯವೇ ಸ್ವರ್ಗ; ಶಾಪದ ಸಂದಾಯವೇ ನರಕ. ಈ ಸ್ವರ್ಗ-ನರಕಗಳಿರುವುದು ಇಲ್ಲಿಯೇ. "ಅಯ್ಯಾ ಎಂದೆಡೆ ಸ್ವರ್ಗ; ಎಲವೋ ಎಂದಡೆ ನರಕ" – ಅಣ್ಣನ ಈ ಮಾತು ಅದೆಷ್ಟು ಅರ್ಥಗರ್ಭಿತ! ★

## ನೀರನ್ನು ಸಂರಕ್ಷಿಸಿ : ಪರಮಪೂಜ್ಯ ಶ್ರೀಗಳವರ ಕರೆ




ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸುವುದರ ಮೂಲಕ ''ಜಲಜಾಗೃತಿ'' ಆಂದೋಲನವನ್ನು ಉದ್ಘಾಟಿಸುತ್ತಿರುವುದು. ವೇದಿಕೆಯಲ್ಲಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಕೆ.ಎಸ್.ನಿಂಗಪ್ಪ, ಜಿಲ್ಲಾಧಿಕಾರಿ ಶ್ರೀ ಮಲ್ಲಿಕಾರ್ಜುನ ದ್ಯಾಬೇರಿ, ನಿಗಮದ ವ್ಯವಸ್ಥಾಪಕ ನಿರ್ದೇಶಕ ಶ್ರೀ ಟಿ. ತಿಮ್ಮೇಗೌಡ, ಶಾಸಕರಾದ ಶ್ರೀ ಎಸ್. ಶಿವಣ್ಣ ಮತ್ತು ಶ್ರೀ ಸಿದ್ದಲಿಂಗೇಗೌಡ ಅವರು

ನೀರಿನ ಸದ್ಬಳಕೆ ಹಾಗೂ ಸಂರಕ್ಷಣೆ ಈಗ ಅತ್ಯಗತ್ಯವಾಗಿದ್ದು, ಪ್ರತಿಯೊಬ್ಬರೂ ಇದನ್ನು ಅರಿತುಕೊಳ್ಳಬೇಕು ಎಂದು ಸಿದ್ಧಗಂಗಾ ಮಠದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಿಳಿಸಿದರು.

ಮಾರ್ಚಿ ೨ ರಂದು ಕಾವೇರಿ ನೀರಾವರಿ ನಿಗಮದ ಆಶ್ರಯದಲ್ಲಿ ಡಾ. ಗುಬ್ಬಿ ವೀರಣ್ಣ ಕಲಾಕ್ಷೇತ್ರದಲ್ಲಿ ಏರ್ಪಡಿಸಲಾಗಿದ್ದ 'ಜಲಜಾಗೃತಿ' ಆಂದೋಲನವನ್ನು ಉದ್ಘಾಟನೆ ಮಾಡಿ ಅವರು ತಮ್ಮ ಆಶೀರ್ವಚನದಲ್ಲಿ ತಿಳಿಸಿದರು.

ಸತತ ಮೂರ್‍ನಾಲ್ಕು ವರ್ಷಗಳ ಬರಗಾಲದಿಂದ ನಾಡು ಕಂಗೆಟ್ಟಿದೆ. ಈ ವರ್ಷ ಅಲ್ಪಪ್ರಮಾಣದಲ್ಲಿ ಮಳೆ ಆಗಿದ್ದರೂ ಇದರಿಂದ ಕೆರೆ ಕಟ್ಟೆಗಳಲ್ಲಿ ನೀರು ನಿಂತಿಲ್ಲ. ಪ್ರಕೃತಿಯ ಮುಂದೆ ಮನುಷ್ಯ ತೃಣ ಮಾತ್ರದವನು ಎಂಬುದು ಅನೇಕ ಸಂದರ್ಭಗಳಲ್ಲಿ ಸಾಬೀತಾಗಿದೆ. ಆದ್ದರಿಂದ ಮಾನವ ಇರುವ ಪ್ರಾಕೃತಿಕ ಸಂಪತ್ತುಗಳನ್ನು ಸಂರಕ್ಷಣೆ ಮಾಡಿಕೊಳ್ಳುವ ಬಗ್ಗೆ ಗಮನ ಕೊಡಬೇಕು ಎಂದು ಅವರು ಕರೆ ನೀಡಿದರು. ಕಾವೇರಿ ನೀರಾವರಿ ನಿಗಮದ ವ್ಯವಸ್ಥಾಪಕ ನಿರ್ದೇಶಕ ಶ್ರೀ ಟಿ. ತಿಮ್ಮೇಗೌಡ ಅವರು ನೀರಿನ ಸದ್ಬಳಕೆಯ ಬಗ್ಗೆ ಸರ್ಕಾರ ಏರ್ಪಡಿಸುತ್ತಿರುವ ಅರಿವು ಮೂಡಿಸುವ ಕಾರ್ಯಕ್ರಮದ ಜೊತೆಗೆ ಸಂಘ ಸಂಸ್ಥೆಗಳು ಮತ್ತು ಜನತೆ ಸಕ್ರಿಯವಾಗಿ ಭಾಗವಹಿಸಬೇಕು ಎಂದು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ಶಾಸಕ ಶ್ರೀ ಎಸ್. ಶಿವಣ್ಣ ಅವರು ಕಾವೇರಿ ನೀರಾವರಿ ನಿಗಮ ನೀರಿನ ಸಂರಕ್ಷಣೆ ಕುರಿತು ಹಮ್ಮಿಕೊಂಡಿರುವ ಕಾರ್ಯಕ್ರಮಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದರು.

ವಿಧಾನಪರಿಷತ್ ಸದಸ್ಯ ಶ್ರೀ ವಿ.ಎಸ್. ಉಗ್ರಪ್ಪ, ಜಿಲ್ಲಾಧಿಕಾರಿ ಶ್ರೀ ಮಲ್ಲಿಕಾರ್ಜುನ ದ್ಯಾಬೇರಿ, ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಶ್ರೀ ಕೆ.ಎಸ್. ನಿಂಗಪ್ಪ, ತಾಲ್ಲೂಕು ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಕುಮಾರಮ್ಮ, ನೀರಾವರಿ ತಜ್ಞ ಶ್ರೀ ಜಿ.ಎಸ್. ಪರಮಶಿವಯ್ಯ, ಕೃಷಿ ತಜ್ಞ ಶ್ರೀ ರುದ್ರಾರಾಧ್ಯ ಅವರು ಭಾಗವಹಿಸಿದ್ದರು. ಹೇಮಾವತಿ ನಾಲಾವಲಯದ ಮುಖ್ಯ ಎಂಜಿನಿಯರ್ ಶ್ರೀ ಮೃತ್ಯುಂಜಯಸ್ವಾಮಿ ಸ್ವಾಗತಿಸಿದರು. ಜಿಲ್ಲಾ ಸಂಪರ್ಕಾಧಿಕಾರಿ ಶ್ರೀ ಬಿ.ಜಿ. ದಿವಾಕರ್ ಅವರು ವಂದಿಸಿದರು.

❑





## ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಪ್ರಾರಂಭ




ಶ್ರೀಮಠದಲ್ಲಿ ನಡೆದ ಕೃಷಿ ಮತ್ತು ಕೈಗಾರಿಕೆಗಳ ವಸ್ತು ಪ್ರದರ್ಶನದ ಉದ್ಘಾಟನಾ ಸಮಾರಂಭ ಪರಮಪೂಜ್ಯ ಶ್ರೀ ಶ್ರೀಗಳವರು ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ವೇದಿಕೆಯಲ್ಲಿ : ಜಿಲ್ಲಾ ಪಂಚಾಯತಿ ಅಧ್ಯಕ್ಷೆ ಶ್ರೀಮತಿ ಸುನಂದ ಪಿ. ಕುಮಾರ್, ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಶ್ರೀ ಕೆ.ಎಸ್. ನಿಂಗಪ್ಪ, ಉಪಕಾರ್ಯದರ್ಶಿ ಶ್ರೀ ಗೋವಿಂದರಾಜು, ಯೋಜನಾ ನಿರ್ದೇಶಕ ಶ್ರೀ ಪ್ರಾಣಲಿಂಗ ಶಿವಸಾಲಿ, ನಗರಸಭೆ ಆಯುಕ್ತ ಶ್ರೀ ರಾಮಚಂದ್ರ, ನಗರಸಭೆ ಸ್ಥಾಯಿ ಸಮಿತಿ ಅಧ್ಯಕ್ಷ ಶ್ರೀ ಡಿ.ಆರ್. ಬಸವರಾಜು ಅವರು.

ಕಳೆದ ೪೦ ವರ್ಷದಿಂದ ಶ್ರೀಕ್ಷೇತ್ರದಲ್ಲಿ ನಡೆಯುತ್ತಿರುವ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನವು ಶ್ರೀಗಳ ದಿವ್ಯ ಶಕ್ತಿಯ ಪ್ರತೀಕವಾಗಿದ್ದು ವಸ್ತುಪ್ರದರ್ಶನ ಕಾರ್ಯಕ್ರಮವು ನಿರಂತರ ಉಜ್ವಲವಾಗಿ ಬೆಳೆಯಲೆಂದು ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಸುನಂದ ಪಿ. ಕುಮಾರ್ ಆಶಿಸಿದರು.

ಅವರು ಫೆಬ್ರುವರಿ ೨೮ರಂದು ಶ್ರೀಸಿದ್ಧಗಂಗೆಯಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಜಾತ್ರಾ ಮಹೋತ್ಸವ ಅಂಗವಾಗಿ ಏರ್ಪಡಿಸಿರುವ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನ ಉದ್ಘಾಟಿಸಿ ಮಾತನಾಡಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಕೆ.ಎಸ್. ನಿಂಗಪ್ಪ ಅವರು ಮಾತನಾಡಿ ಪರಮಪೂಜ್ಯ ಶ್ರೀ ಶ್ರೀಗಳವರು ನಡೆದಾಡುವ ದೇವರಂತಿದ್ದಾರೆ. ಶ್ರೀಕ್ಷೇತ್ರದಲ್ಲಿ ಜಾತಿಮತ ಭೇದವಿಲ್ಲದೆ ಅನ್ನದಾನ ವಿದ್ಯಾದಾನವನ್ನು ನೀಡಲಾಗುತ್ತಿದೆ. ಶ್ರೀಮಠದಲ್ಲಿ ನಡೆಯುತ್ತಿರುವ ನಿಸ್ವಾರ್ಥ ಸೇವೆ ಬೇರೆಲ್ಲಿಯೂ ಕಂಡುಬಂದಿರುವುದಿಲ್ಲ ಎಂದು ಪ್ರಶಂಸಿಸಿದರು.

ನಗರಸಭೆಯ ಪ್ರಭಾರ ಅಧ್ಯಕ್ಷ ಶ್ರೀ ಪ್ರಾಣಲಿಂಗ ಶಿವಸಾಲಿ ಅವರು ಮಾತನಾಡಿ ಹಳ್ಳಿಗಾಡಿನಲ್ಲಿ ನಡೆಯುತ್ತಿರುವ ವಸ್ತುಪ್ರದರ್ಶನದಲ್ಲಿ ಜನಜಾನುವಾರುಗಳಿಗೆ ಉತ್ತಮ ಸೌಲಭ್ಯ ಕಲ್ಪಿಸಿರುವುದು ಹೆಮ್ಮೆಯ ಸಂಗತಿಯಾಗಿದ್ದು, ಶ್ರೀಮಠದ ಅಭಿವೃದ್ಧಿಗೆ ಎಲ್ಲರ ಸಹಕಾರ ಅಗತ್ಯವೆಂದರು.

ಜಿ.ಪಂ. ಉಪಕಾರ್ಯದರ್ಶಿ ಶ್ರೀ ಗೋವಿಂದರಾಜು ಮಾತನಾಡಿ, ಕೃಷಿ ಕ್ಷೇತ್ರದಲ್ಲಾಗಿರುವ ತಾಂತ್ರಿಕ ಬದಲಾವಣೆ ಮಾಹಿತಿಯನ್ನು ಗ್ರಾಮೀಣ ರೈತರಿಗೆ ತಿಳಿಸಲು ವಸ್ತುಪ್ರದರ್ಶನದಲ್ಲಿ ವ್ಯವಸ್ಥೆ ಮಾಡಲಾಗಿದ್ದು, ರೈತರು ವಸ್ತುಪ್ರದರ್ಶನದ ಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳುವಂತೆ ಸಲಹೆ ನೀಡಿದರು.

ದಿವ್ಯಸಾನ್ನಿಧ್ಯ ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀಗಳವರು ತಮ್ಮ ಅನುಗ್ರಹ ನುಡಿಯಲ್ಲಿ ಪ್ರಪಂಚ ಸಂಕುಚಿತವಾಗಿದ್ದು, ಮನುಷ್ಯರು ಪರಸ್ಪರ ಪ್ರೀತಿ ವಿಶ್ವಾಸದಿಂದ ಸಹಕಾರ ಮನೋಭಾವನೆಯಿಂದ ಬದುಕಬೇಕು. ಎಲ್ಲರೂ ಶ್ರಮ ವಹಿಸಿ ಕೆಲಸ ಮಾಡಿದರೆ ರಾಷ್ಟ್ರ ಪ್ರಗತಿಯಾಗುತ್ತದೆ. ಪ್ರತಿಯೊಬ್ಬರಿಗೂ ರಾಷ್ಟ್ರ ಪ್ರೇಮದ ಭಾವನೆಯನ್ನು ಬೆಳೆಸಿಕೊಂಡು ಪ್ರಾಮಾಣಿಕವಾಗಿ ಜೀವನ ನಡೆಸಬೇಕೆಂದರು.

ನಗರಸಭೆಯ ಆಯುಕ್ತ ಶ್ರೀ ಎಂ. ರಾಮಚಂದ್ರ, ಸ್ಥಾಯಿ ಸಮಿತಿ ಅಧ್ಯಕ್ಷ ಶ್ರೀ ಡಿ.ಆರ್. ಬಸವರಾಜು, ಸದಸ್ಯರಾದ ಶ್ರೀ ಪಿ.ಎಸ್. ರಮೇಶ್, ಶ್ರೀ ನಯಾಜ್ ಅಹಮದ್, ಎಸ್‌ಟಿಡಿ ಶ್ರೀ ನಾಗರಾಜ್ ಮುಂತಾದವರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಕು. ಜಯಶ್ರೀ, ಕು. ವಸಂತ ಅವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಪ್ರಾರ್ಥಿಸಿದರು. ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಜಂಟಿ ಕಾರ್ಯದರ್ಶಿ ಶ್ರೀ ಎಸ್. ಶಿವಕುಮಾರ್ ಸ್ವಾಗತಿಸಿದರು. ಶ್ರೀ ಹೆಚ್. ಸುರೇಶ್ ವಸ್ತುಪ್ರದರ್ಶನ ವರದಿ ವಾಚಿಸಿದರು. ಜಂಟಿ ಕಾರ್ಯದರ್ಶಿ ಶ್ರೀ ಎಸ್. ಗಂಗಾಧರಯ್ಯ ವಂದಿಸಿದರು. ಸಾಂಸ್ಕೃತಿಕ ಸಮಿತಿ ಸಹಸಂಚಾಲಕ ಶ್ರೀ ಜಿ. ಕುಮಾರಸ್ವಾಮಿ ಕಾರ್ಯಕ್ರಮ ನಿರೂಪಿಸಿದರು.

> ಆಲೋಚನೆಯಿಲ್ಲದ ಅಧ್ಯಯನದಿಂದ ಶ್ರಮ ವ್ಯರ್ಥ,
> ಅಧ್ಯಯನವಿಲ್ಲದ ಆಲೋಚನೆ ಅಪಾಯಕಾರಿ.
> - ಕನ್‌ಫ್ಯೂಷಿಯಸ್

## ಜಂಗಮ ಜೋಳಿಗೆ

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಯವರು ೨೦೦೫ನೇ ಸಾಲಿನ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯವರ ಜಾತ್ರಾ ಮಹೋತ್ಸವದಲ್ಲಿ ಪಾಲ್ಗೊಳ್ಳುವ ಲಕ್ಷ ಲಕ್ಷ ಭಕ್ತಾದಿಗಳಿಗೆ ದಾಸೋಹ ವ್ಯವಸ್ಥೆ ಮಾಡಲು ಈ ಸಲವೂ ಭಿಕ್ಷಾಟನೆ ಕೈಗೊಂಡರು. ಪೂಜ್ಯ ಸ್ವಾಮೀಜಿಯವರು ೯೭ನೇ ವಯಸ್ಸಿನಲ್ಲಿಯೂ ದಣಿವರಿಯದೆ ಐದು ದಿನಗಳ ಕಾಲ ಕೈಗೊಂಡ ಈ ಪುಣ್ಯಕಾರ್ಯಕ್ಕೆ ವರ್ತಕರು, ಭಕ್ತಾದಿಗಳು ದವಸ-ಧಾನ್ಯ ಕಾಣಿಕೆಯ ಮೂಲಕ ತಮ್ಮ ಭಕ್ತಿಯನ್ನು ಸಮರ್ಪಿಸಿದರು. ಅದರ ಒಂದು ಸಂಕ್ಷಿಪ್ತ ವಿವರ ಹೀಗಿದೆ.

ಅಕ್ಕಿ ೨೩೪ ಪ್ಯಾಕೆಟ್, ರಾಗಿ ೧೪೭ ಪ್ಯಾಕೆಟ್, ಕಾಳು ಮತ್ತು ಬೇಳೆ ೫೬ ಪ್ಯಾಕೆಟ್, ಬೆಲ್ಲ ೧೨ ಮೂಟೆ, ಮೆಣಸಿನಕಾಯಿ ೫ ಮೂಟೆ, ತೆಂಗಿನಕಾಯಿ ೬ ಮೂಟೆ, ಧನಿಯಾ ೧೧ ಚೀಲ, ಉಪ್ಪು ೪೦ ಚೀಲ, ಜೋಳ ೩ ಕ್ವಿಂಟಾಲ್, ಕಡ್ಲೆ ೨ ಕ್ವಿಂಟಾಲ್, ಅವಲಕ್ಕಿ ೨ ಕ್ವಿಂಟಾಲ್, ಈರುಳ್ಳಿ ೨೩ ಪ್ಯಾಕೆಟ್, ಬೆಳ್ಳುಳ್ಳಿ ೩ ಪ್ಯಾಕೆಟ್, ಹುಣಸೆಹಣ್ಣು ೬೪ ಪೆಂಡಿ, ಕಡ್ಲೆಕಾಯಿಎಣ್ಣೆ ೧೧ ಟಿನ್, ಬಕೀಟ್‌ಗಳು ೧೯, ಬಾಂಡ್ಲಿ ೪೨, ಸ್ಟೀಲ್ ಬಕೇಟ್ ಮತ್ತು ಜಗ್ ೧೨, ಸ್ಟೀಲ್ ತಟ್ಟೆ ೨೫, ಪ್ಲಾಸ್ಟಿಕ್ ಬಿಂದಿಗೆ, ಬಕೆಟ್ ಮತ್ತು ತಂಬಿಗೆ ೧೨೦.

ದವಸ ಧಾನ್ಯಗಳು ಮತ್ತು ವಸ್ತುಗಳ ಜೊತೆಗೆ ಸುಮಾರು ೩,೫೫,೧೩೦.೦೦ ರೂ. (ಮೂರು ಲಕ್ಷದ ಐವತ್ತೈದು ಸಾವಿರದ ನೂರು ಮೂವತ್ತು ರೂ.)ಗಳನ್ನು ಕಾಣಿಕೆಯಾಗಿ ನೀಡಿದರು.

ದಿನಾಂಕ ೧೫-೨-೨೦೦೫ರಂದು ಬಿಜಾಪುರ ಜಿಲ್ಲೆಯ ಪುಣ್ಯಗ್ರಾಮಗಳಾದ, ಸಿದ್ಧಮ್ಮನಹಳ್ಳಿ, ಶಂಕರಬಂಡೆ, ಕೂರ್ಲು ಗುಂಡಿ, ಯರಯಂಗಳಗಿ, ಇಬ್ರಾಹಿಂಪುರ ಬಂದವಹಳ್ಳಿಯ ಭಕ್ತಾದಿಗಳು, ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಸೇರಿ ತಾವು ತಮ್ಮ ಹೊಲದಲ್ಲಿ ಬೆಳೆದ ಸುಮಾರು ೨೫೦ ಮೂಟೆ ಮೆಣಸಿನಕಾಯಿ, ೪೦ ಕ್ವಿಂಟಾಲ್ ಜೋಳ, ೪೦ ಕ್ವಿಂಟಾಲ್ ಭತ್ತ ಧನಿಯಾವನ್ನು, ಶ್ರೀಮಠದ ದಾಸೋಹಕ್ಕೆ ನೀಡಿ ಸಹಕರಿಸಿದ್ದಾರೆ. ಇದರಲ್ಲಿ ಶ್ರೀಮಠದ ಮುಸಲ್ಮಾನ ಹಳೆಯ ವಿದ್ಯಾರ್ಥಿಗಳ ಕೊಡುಗೆ ಪ್ರಶಂಶನೀಯ.

ವರದಿ : ಡಿ.ಎಸ್. ನಾಗರಾಜ್

## ಪುಸ್ತಕ ಬಿಡುಗಡೆ ಸಮಾರಂಭ



ಕ್ಯಾಲೆಂಡರಿನ ಇತಿಹಾಸ ಪುಸ್ತಕ ಬಿಡುಗಡೆಯ ಸಂದರ್ಭ - ಪರಮಪೂಜ್ಯ ಶ್ರೀ ಶ್ರೀಗಳವರು, ನಿವೃತ್ತ ಪ್ರಾಚಾರ್ಯರಾದ ಶ್ರೀ ನರಸಿಂಹಜೀಯರ್ ಮತ್ತು ನಿವೃತ್ತ ಶಿಕ್ಷಣಾಧಿಕಾರಿಗಳಾದ ಶ್ರೀ ಎಸ್.ಆರ್. ಶೇಷಗಿರಿಯಪ್ಪನವರು





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೭೪೨. | ಶ್ರೀಮತಿ ವೈ.ಎಂ. ಮಹದೇವಮ್ಮನವರು<br>ಪ್ರೊಪ್ರೈಟರ್ ಶ್ರೀ ನಂಜುಂಡೇಶ್ವರ ಸಾ ಅಂಡ್<br>ರೈಸ್ ಮಿಲ್, ಕಾಲೇಜ್ ರಸ್ತೆ,<br>ಟಿ. ನರಸೀಪುರ – ೫೭೧ ೧೨೪. | ೨,೨೫೦.೦೦ |
| ೧೭೪೩. | ಶ್ರೀ ಎಂ. ಮುನಿರಾಜಯ್ಯ<br>ನಂ. ೯೫, ೧ನೇ ಮೈನ್,<br>ಮತ್ತೀಕೆರೆ ಅಟ್ ಅಂಡ್ ಪೋಸ್ಟ್,<br>ಬೆಂಗಳೂರು – ೫೬೦ ೦೫೪. | ೨,೦೦೦.೦೦ |
| ೧೭೪೪. | ಶ್ರೀಮತಿ ಲಕ್ಷ್ಮಮ್ಮ<br>'ಡಿ' ಗ್ರೂಫ್ ನೌಕರರು,<br>ಶ್ರೀ ಮಂಜುನಾಥ ಬಾಲಕಿಯರ ಪ್ರೌಢಶಾಲೆ,<br>ನೆಲಮಂಗಲ ಅಟ್ ಅಂಡ್ ಪೋಸ್ಟ್,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೦.೦೦ |
| ೧೭೪೫. | ಶ್ರೀ ಹನುಮಂತರಾಯಪ್ಪ<br>ಗಣಿತಶಾಸ್ತ್ರ ಉಪನ್ಯಾಸಕರು,<br>ಶ್ರೀ ಸಿದ್ಧಗಂಗಾ ಪ್ರಥಮದರ್ಜೆ ಕಾಲೇಜು<br>ಬಿ.ಹೆಚ್. ರಸ್ತೆ, ತುಮಕೂರು – ೨. | ೧,೫೦೦.೦೦ |
| ೧೭೪೬. | ಶ್ರೀ ಎಂ.ಎಸ್. ವಿಜಯ<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಆಂಗ್ಲ ಮಾಧ್ಯಮ ಹಿರಿಯ<br>ಪ್ರಾಥಮಿಕ ಶಾಲೆ, ಬಿ.ಹೆಚ್. ರಸ್ತೆ,<br>ತುಮಕೂರು – ೫೭೨ ೧೦೨. | ೨,೦೦೧.೦೦ |
| ೧೭೪೭. | ಶ್ರೀ ಎ.ಬಿ. ಮರೇಗೌಡ ಬಿನ್<br>ಲೇಟ್ ಭದ್ರಯ್ಯ<br>ನಿವೃತ್ತ ಶಿಕ್ಷಕರು,<br>ಅಂದಾನೇಗೌಡರ ಪಾಳ್ಯ,<br>ಬೆಟ್ಟದಹಳ್ಳಿ ಮಠ ಅಂಚೆ, ಕುಣಿಗಲ್ ತಾ,<br>ತುಮಕೂರು ಜಿಲ್ಲೆ. | ೨,೦೦೧.೦೦ |
| ೧೭೪೮. | ಶ್ರೀ ಎಸ್. ಗಂಗಾಧರಯ್ಯ<br>ಪ್ರಭಾರ ಅಧೀಕ್ಷಕರು | ೨,೦೦೧.೦೦ |
| ೧೭೪೯. | ಶ್ರೀ ಜಿ. ರಾಜಶೇಖರ್<br>ಪ್ರಶಿಕ್ಷಕರು | ೨,೦೦೧.೦೦ |
| ೧೭೫೦. | ಶ್ರೀ ಎ.ಎಸ್. ನಂಜಾಮರಿ<br>ಪ್ರಶಿಕ್ಷಕರು | ೨,೦೦೧.೦೦ |
| ೧೭೫೧. | ಶ್ರೀಮತಿ ಹೆಚ್. ಪುಟ್ಟಮಲ್ಲಮ್ಮ<br>ಪ್ರಶಿಕ್ಷಕಿ | ೨,೦೦೧.೦೦ |
| ೧೭೫೨. | ಶ್ರೀ ಜಿ. ಸೋಮಶೇಖರಯ್ಯ<br>ಪ್ರಶಿಕ್ಷಕರು | ೨,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೭೫೩. | ಶ್ರೀ ಆರ್. ಬಸವರಾಜಯ್ಯ<br>ಪ್ರಶಿಕ್ಷಕರು | ೨,೦೦೧.೦೦ |
| ೧೭೫೪. | ಶ್ರೀಮತಿ ಕೆ.ಸಿ. ರೇಣುಕಮ್ಮ<br>ಚಿತ್ರಕಲಾ ಶಿಕ್ಷಕಿ | ೨,೦೦೧.೦೦ |
| ೧೭೫೫. | ಶ್ರೀ ವೆಂಕಟಾಚಲಶೆಟ್ಟಿ<br>ದ್ವಿ.ದ. ಸಹಾಯಕರು | ೨,೦೦೧.೦೦ |
| ೧೭೫೬. | ಶ್ರೀ ಹೆಚ್. ಸಿದ್ಧಗಂಗಯ್ಯ<br>ಪ್ರ.ಶಾ. ಸಹಾಯಕರು | ೨,೦೦೧.೦೦ |
| ೧೭೫೭. | ಶ್ರೀ ಆರ್.ಎಂ. ರಾಮು<br>'ಡಿ' ಗ್ರೂಫ್ ನೌಕರರು | ೨,೦೦೧.೦೦ |
| | ಕ್ರ.ಸಂ. ೧೭೪೮ ರಿಂದ ೧೭೫೭ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಶಿಕ್ಷಕರ ತರಬೇತಿ ಸಂಸ್ಥೆ, ಬಿ.ಹೆಚ್. ರಸ್ತೆ,<br>ತುಮಕೂರು – ೫೭೨ ೧೦೨. | |
| ೧೭೫೮. | ಶ್ರೀ ಎಸ್. ಸಿದ್ಧಲಿಂಗಪ್ಪ<br>ನಂ. ೨೬/೩೩, ೧ನೇ ಮುಖ್ಯರಸ್ತೆ<br>೪ನೇ ಕ್ರಾಸ್, ಆಜಾದ್‌ನಗರ,<br>ಬೆಂಗಳೂರು – ೫೬೦ ೦೧೮. | ೩,೦೦೦.೦೦ |
| ೧೭೫೯. | ಶ್ರೀ ನಂಜುಂಡಪ್ಪ<br>ವೃತ್ತಿ ಶಿಕ್ಷಕರು,<br>ಶ್ರೀ ಜಯಮಂಗಲಿ ಗ್ರಾಮಾಂತರ ಪ್ರೌಢಶಾಲೆ,<br>ನಿಟ್ರಹಳ್ಳಿ, ಮಧುಗಿರಿ ತಾಲ್ಲೂಕು,<br>ತುಮಕೂರು ಜಿಲ್ಲೆ. | ೨,೦೦೧.೦೦ |
| ೧೭೬೦. | ಶ್ರೀ ನಾಗರಾಜು<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂ.ಪ.ಪೂರ್ವ ಕಾಲೇಜು,<br>(ಪ್ರೌಢಶಾಲಾ ವಿಭಾಗ), ಬಿ.ಹೆಚ್. ರಸ್ತೆ<br>ತುಮಕೂರು – ೫೭೨ ೧೦೨. | ೨,೦೦೧.೦೦ |
| ೧೭೬೧. | ಡಾ. ಹೆಚ್. ರಾಜಶೇಖರ<br>ನಂ. ೬೩೦, ಹೆಚ್. ಕ್ರಾಸ್,<br>ಅನಿಕೇತನ ರಸ್ತೆ, ಕುವೆಂಪುನಗರ,<br>ಮೈಸೂರು. | |
| ೧೭೬೨. | ಶ್ರೀ ಬಿ. ಚಂದ್ರಪ್ಪ<br>ಸಹ ಶಿಕ್ಷಕರು | ೧,೦೦೦.೦೦ |
| ೧೭೬೩. | ಶ್ರೀ ಪ್ರೇಮ್‌ಕುಮಾರ್<br>ದ್ವಿ.ದ.ಸ. | ೧,೦೦೦.೦೦ |
| | ಕ್ರ.ಸಂ. ೧೭೬೨ ರಿಂದ ೧೭೬೩ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ನಾರಸಂದ್ರ,<br>ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೭೬೪. | ಶ್ರೀ ಎಸ್. ಗುರುಸಿದ್ಧಪ್ಪ ಬಿನ್ ಸಿದ್ಧಲಿಂಗಪ್ಪ, ರಾಯರಪಾಳ್ಯ, ಸೋಂಪುರ ಹೋಬಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೧೦.೦೦ |
| ೧೭೬೫. | ಶ್ರೀ ಆರ್. ಸಿದ್ಧರಾಮೇಗೌಡ ಮಾರುತಿ ಫಾರಂ ಸರ್ವಿಸಸ್, ನಂ. ೭೫, ಎಸ್.ಎನ್.ಪಿಇಟಿ, ಬಳ್ಳಾರಿ ಅಟ್ ಅಂಡ್ ಪೋಸ್ಟ್, ಬಳ್ಳಾರಿ. | ೨,೫೦೦.೦೦ |
| ೧೭೬೬. | ಶ್ರೀ ಟಿ.ಪಿ. ಪದ್ಮರಾಜಯ್ಯ ದ್ವಿ.ದ.ಸ. ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ, ತಂಡಗ, ತುರುವೇಕರೆ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೦.೦೦ |
| ೧೭೬೭. | ಶ್ರೀ ಕೆ.ಎಸ್. ನಾಗರಾಜಯ್ಯ ಸಬ್ ಡಿವಿಜನ್ ಇಂಜಿನಿಯರಿಂಗ್, ಟೆಲಿಫೋನ್ಸ್, ಟಿ ಅಂಡ್ ಡಿ ಸರ್ಕಲ್, ನಂ. ೧೯, ೯ನೇ 'ಡಿ' ಮೈನ್ ರಸ್ತೆ, ಫೈಪ್ ಲೇನ್ ರಸ್ತೆ, ವಿಜಯನಗರ, ಬೆಂಗಳೂರು – ೫೬೦ ೦೪೦. | ೧೫,೫೦೦.೦೦ |
| ೧೭೬೮. | ಶ್ರೀ ಕೆ.ಹೆಚ್. ಪರಮಶಿವಯ್ಯ ಪ್ರಾಂಶುಪಾಲರು, ಶ್ರೀ ಸಿದ್ಧಗಂಗಾ ಸಂಜೆ ಪ್ರಥಮದರ್ಜೆ ಕಾಲೇಜು, ತುಮಕೂರು – ೫೭೨ ೧೦೨. | ೧,೦೦೦.೦೦ |
| ೧೭೬೯. | ಶ್ರೀ ದೊಡ್ಡನರಸಯ್ಯ 'ಡಿ' ಗ್ರೂಪ್ ನೌಕರರು, ಶ್ರೀ ಬಸವೇಶ್ವರ ಪ್ರೌಢಶಾಲೆ, ಸೋಲೂರು, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೦.೦೦ |
| ೧೭೭೦. | ಶ್ರೀ ಈ.ಎಸ್. ಪಾಲಾಕ್ಷ ಬೆ-೫/೪೦೪, 'ಜಾನಕಿ ಕಾಂಪ್ಲೆಕ್ಸ್' ಕಾಸ್ಮೋಪಾಲಿಟನ್ ಸಿ.ಹೆಚ್.ಎಸ್. ಸೆಕ್ಟಾರ್-೧೯, ನೆರುಲ್, ನವಮುಂಬಯಿ – ೪೦೦ ೭೦೬. | ೫,೦೦೦.೦೦ |
| ೧೭೭೧. | ಶ್ರೀ ಕೆ.ಎನ್. ವೆಂಕಟಾಚಲಪತಿ ಸಹ ಶಿಕ್ಷಕರು | ೨,೦೦೧.೦೦ |
| ೧೭೭೨. | ಶ್ರೀಮತಿ ರೇಣುಕಾಂಬ ಸಹ ಶಿಕ್ಷಕರು | ೨,೦೦೧.೦೦ |
| ೧೭೭೩. | ಶ್ರೀ ವಿ. ಬಸವರಾಜು ಕನ್ನಡ ಶಿಕ್ಷಕರು | ೨,೦೦೧.೦೦ |
| ೧೭೭೪. | ಶ್ರೀ ಕೆ.ಎಸ್. ಉಮಾಮಹೇಶ್ ಕನ್ನಡ ಶಿಕ್ಷಕರು | ೨,೦೦೧.೦೦ |
| ೧೭೭೫. | ಶ್ರೀ ದೊಡ್ಡಬಸಪ್ಪ ಸಹ ಶಿಕ್ಷಕರು | ೨,೦೦೧.೦೦ |
| ೧೭೭೬. | ಶ್ರೀ ಟಿ.ಪಿ. ಪ್ರಭು ಹಿಂದಿ ಶಿಕ್ಷಕರು | ೨,೦೦೧.೦೦ |
| ೧೭೭೭. | ಶ್ರೀ ಕೆ.ಆರ್. ಶಿವಗಂಗಪ್ಪ ಸಹ ಶಿಕ್ಷಕರು | ೨,೦೦೧.೦೦ |
| ೧೭೭೮. | ಶ್ರೀಮತಿ ಎಲ್. ಮೀನಾಕ್ಷಿ ಸಹ ಶಿಕ್ಷಕರು | ೨,೦೦೧.೦೦ |
| ೧೭೭೯. | ಶ್ರೀ ಎಸ್. ರಾಜಶೇಖರಯ್ಯ ಸಹ ಶಿಕ್ಷಕರು | ೨,೦೦೧.೦೦ |
| ೧೭೮೦. | ಶ್ರೀ ಆರ್. ಶೈಲಜಕುಮಾರಿ ಹಿಂದಿ ಶಿಕ್ಷಕರು | ೨,೦೦೧.೦೦ |
| ೧೭೮೧. | ಶ್ರೀ ಕೆ.ಹೆಚ್. ವೇದಮೂರ್ತಿ ದೈಹಿಕ ಶಿಕ್ಷಕರು | ೨,೦೦೧.೦೦ |
| ೧೭೮೨. | ಶ್ರೀ ಕೆ.ಪಿ. ಜಯಣ್ಣ ಚಿತ್ರಕಲಾ ಶಿಕ್ಷಕರು | ೨,೦೦೧.೦೦ |
| ೧೭೮೩. | ಶ್ರೀ ಇಲ್ಯಾಸ್ ಅಹ್ಮದ್ ದ್ವಿ.ದ.ಸ., | ೨,೦೦೧.೦೦ |
| ೧೭೮೪. | ಶ್ರೀ ಎ.ಜಿ. ಗಂಗಾಧರಯ್ಯ ಪ್ರ.ಶಾ. ಸಹಾಯಕರು | ೨,೦೦೧.೦೦ |
| ೧೭೮೫. | ಶ್ರೀ ಕೆ.ಬಿ. ರಾಜಶೇಖರಯ್ಯ 'ಡಿ' ಗ್ರೂಪ್ ನೌಕರರು | ೨,೦೦೧.೦೦ |
| ೧೭೮೬. | ಶ್ರೀ ಬಸವಾಚಾರ್ ಸಹ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೭೭೧ ರಿಂದ ೧೭೮೬ರ ವರೆಗಿನ ವಿಳಾಸ ಶ್ರೀ ಸಿದ್ಧಗಂಗಾ ಸಂ. ಪಂ. ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ), ಬಿ.ಹೆಚ್. ರಸ್ತೆ, ತುಮಕೂರು – ೨. | |
| ೧೭೮೭. | ಶ್ರೀ ಎಂ. ಶಿವರುದ್ರಯ್ಯ ಸಹ ಶಿಕ್ಷಕರು, ಶ್ರೀ ಶಿವಕುಮಾರಸ್ವಾಮಿ ಗ್ರಾಮಾಂತರ ಪ್ರೌಢಶಾಲೆ, ಬ್ಯಾಲಕೆರೆ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೦.೦೦ |
| ೧೭೮೮. | ಶ್ರೀ ಪಿ.ಎನ್. ಪ್ರಕಾಶ್ ಸಹ ಶಿಕ್ಷಕರು, ಶ್ರೀ ಶಿವಕುಮಾರಸ್ವಾಮಿ ಗ್ರಾ. ಪ್ರೌಢಶಾಲೆ, ಬ್ಯಾಲಕೆರೆ, ಮಾಗಡಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೦.೦೦ |

(ಮುಂದುವರೆಯುತ್ತದೆ)





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೩.೬೮. | ಶ್ರೀ ರೇವಣ್ಣಸಿದ್ದಯ್ಯ (ಉಲ್ಲಾಳು) ನಂ. ೪೫೫, ೨ನೇ ಮುಖ್ಯರಸ್ತೆ, ಭವಾನಿನಗರ, ಗವೀಪುರಂ ಗುಟ್ಟಹಳ್ಳಿ, ಬೆಂಗಳೂರು – ೫೬೦ ೦೧೯. | ೨೫,೦೦೧.೦೦ |
| ೧೩.೬೯. | ಶ್ರೀ ಚೆನ್ನಬಸವೇಗೌಡ ಸಹ ಶಿಕ್ಷಕರು, ಶ್ರೀ ಸಿದ್ಧಗಂಗಾ ಸಂ. ಪ.ಪೂರ್ವ ಕಾಲೇಜು, ಬೂದಿಗೆರೆ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೧೩.೭೦. | ಶ್ರೀ ಸಿದ್ಧರಾಮಯ್ಯ ಸಹ ಶಿಕ್ಷಕರು | ೧,೦೦೦.೦೦ |
| ೧೩.೭೧. | ಶ್ರೀ ವೀರಣ್ಣ ದೈಹಿಕ ಶಿಕ್ಷಕರು | ೧,೦೦೦.೦೦ |
| ೧೩.೭೨. | ಶ್ರೀ ಟಿ. ಗೋವಿಂದರಾಜು ಸೇವಕರು | ೧,೦೦೦.೦೦ |
| | ಕ್ರ.ಸಂ. ೧೩.೭೦ ರಿಂದ ೧೭೭೨ರ ವರೆಗಿನ ವಿಳಾಸ ಶ್ರೀ ಸ್ವಾಮಿ ವಿವೇಕಾನಂದ ಪ್ರೌಢಶಾಲೆ, ಕುಪ್ಪೂರು, ಚಿಕ್ಕನಾಯಕನಹಳ್ಳಿ ತಾಲ್ಲೂಕು. | |
| ೧೩.೭೩. | ಶ್ರೀ ಹೆಚ್.ಎಸ್. ಚಂದ್ರಶೇಖರಯ್ಯ ನಂ. ೯೨, ೩ನೇ ಕ್ರಾಸ್, ಹೊಯ್ಸಳನಗರ, ಸುಂಕದಕಟ್ಟೆ, ಬೆಂಗಳೂರು – ೯೧. | ೧,೦೦೧.೦೦ |
| ೧೩.೭೪. | ಶ್ರೀ ಎಮ್. ಗಜೇಂದ್ರಕುಮಾರ್ ಬಿನ್ ಟಿ.ಆರ್. ಮಹದೇವಯ್ಯ ನಂ. ೧೩೬, ೧ನೇ ಮೈನ್, ೧ನೇ ಬ್ಲಾಕ್, ನಾಗರಬಾವಿ ೩ನೇ ಸ್ಟೇಜ್, ಬೆಂಗಳೂರು – ೫೬೦ ೦೭೨. | ೧,೦೦೧.೦೦ |
| ೧೩.೭೫. | ಶ್ರೀ ಹೆಚ್.ಎಸ್. ವೀರಬಸಪ್ಪ ಸಹ ಶಿಕ್ಷಕರು, ಶ್ರೀ ಸುವರ್ಣಮುಖಿ ಪ್ರೌಢಶಾಲೆ, ಮಲ್ಲೇಕಾವು, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |
| ೧೩.೭೬. | ಶ್ರೀ ನಾಗರಾಜು ಸಹ ಶಿಕ್ಷಕರು, ಶ್ರೀ ಸುವರ್ಣಮುಖಿ ಪ್ರೌಢಶಾಲೆ, ಮಲ್ಲೇಕಾವು, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೧.೦೦ |
| ೧೩.೭೭. | ಶ್ರೀ ಕುಮಾರಸ್ವಾಮಿ ಸಹ ಶಿಕ್ಷಕರು | ೧,೦೦೧.೦೦ |
| ೧೩.೭೮. | ಶ್ರೀ ಹರಪ್ರಸಾದ್ ಸಹ ಶಿಕ್ಷಕರು | ೧,೦೦೧.೦೦ |
| ೧೩.೭೯. | ಶ್ರೀ ಎನ್. ಶಿವಕುಮಾರಸ್ವಾಮಿ ಸಹ ಶಿಕ್ಷಕರು | ೧,೦೦೦.೦೦ |
| | ಕ್ರ.ಸಂ. ೧೩.೭೭ ರಿಂದ ೧೭೭೯ರ ವರೆಗಿನ ವಿಳಾಸ ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ), ಹಾಲನೂರು, ತುಮಕೂರು ತಾಲ್ಲೂಕು ಮತ್ತು ಜಿಲ್ಲೆ. | |
| ೧೩೮೦. | ಶ್ರೀ ವಿರೂಪಾಕ್ಷಪ್ಪ ವಿ. ಬಳಿಗಾರ ನಂ. ೫೦೩, ಪ್ರಸಾದ್ ಅಪಾರ್ಟ್‌ಮೆಂಟ್, ಚಾಪೇಕರ್ ಮಾರ್ಗ, ಬೊಂಬಾಯಿ–೮೧. | ೧,೦೦೧.೦೦ |
| ೧೩೮೧. | ಶ್ರೀ ದಾಳಪ್ಪ ನಿ. ಯಂತ್ರಗಾರ ಅಧೀಕ್ಷಕರು, ನಂ. ೬೫೮, ಶ್ರೀ ಶಾರದ ನಿಲಯ, ೨ನೇ ಬ್ಲಾಕ್, ೧ನೇ ಹಂತ, ಪೀಣ್ಯ, ಬೆಂಗಳೂರು – ೫೬೦ ೦೫೮. | ೧,೦೦೧.೦೦ |
| ೧೩೮೨. | ಶ್ರೀ ಕೆ.ಬಿ. ರೇಣುಕಯ್ಯ ಪ್ರ. ಶಿಕ್ಷಕರು, ಶ್ರೀ ಬಸವೇಶ್ವರ ಶಿಕ್ಷಕರ ತರಬೇತಿ ಸಂಸ್ಥೆ, ಶ್ರೀ ಸಿದ್ಧಗಂಗಾ ಮಠ, ತುಮಕೂರು. | ೧,೦೦೦.೦೦ |
| ೧೩೮೩. | ಶ್ರೀ ಬಿ.ಎಂ. ಶಿವರುದ್ರಯ್ಯ ದೈಹಿಕ ಶಿಕ್ಷಕರು, ನಿವೇದಿತಾ ಪ್ರೌಢಶಾಲೆ, ಕ್ಯಾತ್ಸಂದ್ರ, ತುಮಕೂರು–೪. | ೧,೦೦೧.೦೦ |
| ೧೩೮೪. | ಶ್ರೀ ಜೆ.ಎಲ್. ಮಂಜುನಾಥ್ ನಂ. ೩೪೦, 'ಪರಂಜ್ಯೋತಿ', ಸರಸ್ವತಿ ನಗರ, ೧೫ನೇ ಕ್ರಾಸ್, ವಿಜಯನಗರ, ಬೆಂಗಳೂರು – ೫೬೦ ೦೪೦. | ೧,೦೦೧.೦೦ |
| ೧೩೮೫. | ಶ್ರೀ ಕೆ.ಎಂ. ಜಯರಾಜು ಕಾಫಿ ಬೆಳೆಗಾರರು, ಕೆಂಚಾಂಬಿಕಾ ನಿಲಯ, ೩ನೇ ಕ್ರಾಸ್, ಸಂಪಿಗೆ ರಸ್ತೆ, ಕೆ.ಆರ್. ಪುರಂ, ಹಾಸನ – ೫೭೩ ೨೦೧. | ೧,೦೦೧.೦೦ |

(ಮುಂದುವರೆಯುತ್ತದೆ)

RNI No. 17139/69 "Siddaganga" Monthly - Postal Reg. No. KA/SK/TMR/385/2003-05

# ವೈಭವದ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾ ಮಹೋತ್ಸವ - ವಿವಿಧ ದೃಶ್ಯಾವಳಿ
















Printed at: Geetanjali Graphics #4, M.S.R. Indl Estate, Bangalore - 54. Ph: 23604087